



# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

Monthly News Magazine

Vol-15 Issue No. 12 December - 2018 ₹ 10/-




ನವೆಂಬರ್ 30 ರಿಂದ ಡಿಸೆಂಬರ್ 04, 2018ರ ವರೆಗೆ ಬೆಳಗಾವಿ ಜಿಲ್ಲೆ ಗಣಾಚಾರಿ ಕನ್ನಡ ಹಿರಿಯ ಪ್ರಾಥಮಿಕ ಶಾಲೆ, ಮರಕುಂಟಿ ಇಲ್ಲಿ ನಡೆದ 41ನೇ ರಾಜ್ಯ ಮಟ್ಟದ ಕಬ್-ಬುಲ್ ಬುಲ್ ಉತ್ಸವದ ಉದ್ಘಾಟನೆಯನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರು ನೆರವೇರಿಸಿದರು. ಚಿತ್ರದಲ್ಲಿ ಶ್ರೀ ಜಿ.ಬಿ. ಮನ್ನಿಕೇರಿ, ಜಿ. ಮು. ಆ, ಶ್ರೀ ಬಸವರಾಜ ಬಂಡಿವಡ್ಡರ, ಜಿ.ಪಂ. ಸದಸ್ಯರು, ಶ್ರೀಮತಿ ಪ್ರಭಾವತಿ ಪಾಟೀಲ, ಜಿ.ಆ(ಗೈ), ಡಾ. ಸಿ.ಟಿ. ಗಣಾಚಾರಿ ಶ್ರೀಮತಿ ಪಾರ್ವತಿ ವಸ್ತ್ರದ, ಬಿ.ಇ.ಓ., ಶ್ರೀ ಕೇಶವ ಪೆಟ್ಲೂರ, ಬಿ.ಇ.ಓ., ಶ್ರೀ ಪ್ರಕಾಶ್ ಪೂಜಾರಿ, ಶ್ರೀಮತಿ ಶ್ರೀದೇವಿ ನಾಗನೂರ, ಶ್ರೀ ದೇವರೆಡ್ಡಿ ಶ್ರೀ ಶ್ರೀಕಾಂತ ಸುಂಕದ, ತಾ.ಪಂ. ಸದಸ್ಯರು, ಶ್ರೀಮತಿ ಸಿ. ಮಂಜುಳಾ, ಜಿಲ್ಲಾ ಪದಾಧಿಕಾರಿಗಳು, ಕಬ್-ಬುಲ್‌ಬುಲ್‌ಗಳನ್ನು ಕಾಣಬಹುದು.




ಡಿಸೆಂಬರ್ 10 ರಿಂದ 14ರ ವರೆಗೆ ಡಾ॥ ಆನಿಬೆಸೆಂಟ್ ರಾಜ್ಯ ತರಬೇತಿ ಕೇಂದ್ರ, ದೊಡ್ಡಬಳ್ಳಾಪುರದಲ್ಲಿ ನಡೆದ ರಾಜ್ಯಮಟ್ಟದ ರಾಷ್ಟ್ರಪತಿ ಸ್ಕೌಟ್ಸ್-ಗೈಡ್ಸ್ ಪೂರ್ವ ಸಿದ್ಧತಾ ತರಬೇತಿ ಶಿಬಿರ, ನಿರಂತರ ತರಬೇತಿ ಶಿಬಿರಗಳ ಉದ್ಘಾಟನೆ ಮತ್ತು ದಿ. ಕೊಂಡಜ್ಜಿ ಬಸಪ್ಪನವರ ಜನ್ಮ ದಿನಾಚರಣೆಯನ್ನು ಮಾನ್ಯ ಮಾಜಿ ರಾಜ್ಯಸಭಾ ಸದಸ್ಯರಾದ ಶ್ರೀ ಹೆಚ್. ಹನುಮಂತಪ್ಪ ಅವರು ದೀಪ ಬೆಳಗಿಸುವ ಮೂಲಕ ನೆರವೇರಿಸಿದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ, ಡಾ॥ ವಿಜಯಲಕ್ಷ್ಮಿ ಬಾಳೆಕುಂದ್ರಿ, ಮಕ್ಕಳ ಹೃದ್ರೋಗ ತಜ್ಞರು, ರಾಜ್ಯ ಪದಾಧಿಕಾರಿಗಳಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಶ್ರೀಮತಿ ಗೀತಾ ನಟರಾಜ್, ಶ್ರೀ ಕೆ. ಗಂಗಪ್ಪಗೌಡ, ಶ್ರೀ ಎಂ.ಎ. ಚೆಲ್ಲಯ್ಯ, ಶ್ರೀಮತಿಯರಾದ ಬಿ.ವಿ. ರಾಮಲತಾ, ಬಿ.ಡಿ. ಶಾಂತ, ಅರುಣಮಾಲ, ಸಿ. ಮಂಜುಳ, ಕೆ.ವಿ. ಶಾಮಲ ಇವರುಗಳು ಚಿತ್ರದಲ್ಲಿದ್ದಾರೆ.



ನವೆಂಬರ್ 7 ರಂದು ದಾವಣಗೆರೆ ಜಿಲ್ಲಾ ಸಂಸ್ಥೆ ಏರ್ಪಡಿಸಿದ್ದ ಸಂಸ್ಥಾಪನಾ ದಿನಾಚರಣೆ ಅಂಗವಾಗಿ ಮಾನ್ಯ ಮಾಜಿ ಸಚಿವರು ಹಾಗು ದಾವಣಗೆರೆ ವಿಧಾನಸಭಾ ಸದಸ್ಯರಾದ ಶ್ರೀ ಶಾಮನೂರು ಶಿವಶಂಕರಪ್ಪ ನವರು ಧ್ವಜಚೀಟಿ ಬಿಡುಗಡೆ ಮಾಡಿದರು. ಜಿಲ್ಲಾ ಪದಾಧಿಕಾರಿಗಳು, ಸ್ಕೌಟರ್ಸ್-ಗೈಡರ್ಸ್ ಹಾಗೂ ಸ್ಕೌಟ್ಸ್-ಗೈಡ್ಸ್‌ಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.



ಡಿಸೆಂಬರ್ 21 ರಿಂದ 24 ರ ವರೆಗೆ ಮಂಡ್ಯ ಜಿಲ್ಲಾ ಸಂಸ್ಥೆ, ಬೊಮ್ಮನಹಳ್ಳಿ ಗ್ರಾಮದ ವಿಶ್ವಮಾನವ ಶಾಲೆಯಲ್ಲಿ ಏರ್ಪಡಿಸಿದ್ದ ಸ್ಕೌಟ್ಸ್-ಗೈಡ್ಸ್‌ಗಳ ತೃತೀಯ ಸೋಪಾನ್ ಪರೀಕ್ಷಾ ಶಿಬಿರದ ಉದ್ಘಾಟನಾ ಸಮಾರಂಭದಲ್ಲಿ ಶ್ರೀಮಠದ ಶ್ರೀಶ್ರೀಶ್ರೀ ಪರಮಪೂಜ್ಯ ಪುರುಷೋತ್ತಮಾನಂದ ಸ್ವಾಮೀಜಿ, ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ, ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಟಿ. ವರಪ್ರಸಾದ್ ಹಾಗು ಇತರ ಪದಾಧಿಕಾರಿಗಳು ಭಾಗವಹಿಸಿದ್ದರು.




ನವೆಂಬರ್ 24 ರಿಂದ 26ರ ವರೆಗೆ ದಕ್ಷಿಣ ಕನ್ನಡ ಜಿಲ್ಲೆ ಕುಕ್ಕೆ ಸುಬ್ರಹ್ಮಣ್ಯದಲ್ಲಿ ಜರುಗಿದ 72ನೇ ರಾಜ್ಯ ಮಟ್ಟದ ಹಿಮಾಲಯ ವೃಕ್ಷಮಣಿಧಾರಕರ ಸಮಾವೇಶದ ಉದ್ಘಾಟನೆಯನ್ನು ಶ್ರೀ ನಿತ್ಯಾನಂದ ಮುಂಡೂಡಿ, ಅಧ್ಯಕ್ಷರು, ವ್ಯವಸ್ಥಾಪನಾ ಸಮಿತಿ, ಕುಕ್ಕೆ ಶ್ರೀ ಸುಬ್ರಮಣ್ಯ ದೇವಸ್ಥಾನ ಅವರು ನೆರವೇರಿಸಿದರು. ಶ್ರೀ ಪಿ.ಜಿ.ಆರ್. ಸಿಂಧ್ಯ, ಶ್ರೀ ಅಶೋಕ್ ನೇಕ್ರಾಜಿ, ಪ್ರಾಂಶುಪಾಲರಾದ ಪ್ರೊ. ರಂಗಯ್ಯ ಶೆಟ್ಟಿಗಾರ್, ಶ್ರೀಮತಿಯರಾದ ವಿಮಲಾ ರಂಗಯ್ಯ, ಜಿ.ಸ್ಥಾ. ಆಯುಕ್ತರು, ಗೀತಾ ನಟರಾಜ್, ಸುಶೀಲಾ ಹೊಸಮನಿ ಹಾಗೂ ಇತರ ಪದಾಧಿಕಾರಿಗಳು ಹಾಗೂ ತರಬೇತಿ ನಾಯಕರುಗಳು ಚಿತ್ರದಲ್ಲಿದ್ದಾರೆ.



ನವೆಂಬರ್ 3 ರಂದು ಮೈಸೂರು ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಜರುಗಿದ ಪ.ಪೂ. ಕಾಲೇಜಿನ ಪ್ರಾಂಶುಪಾಲರುಗಳ ರೋವರ್-ರೇಂಜರ್ ಮಾಹಿತಿ ಕಾರ್ಯಾಗಾರವನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಸಸಿಗೆ ನೀರೇಯುವುದರ ಮೂಲಕ ಉದ್ಘಾಟಿಸಿದರು. ಡಾ. ದಯಾನಂದ, ಉಪನಿರ್ದೇಶಕರು ಪ.ಪೂ. ವೃತ್ತಿ ಶಿಕ್ಷಣ ಇಲಾಖೆ ಹಾಗೂ ಜಿಲ್ಲಾ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



ಯಾದಗಿರಿ ಜಿಲ್ಲೆ ಶಹಾಪೂರ ತಾಲ್ಲೂಕು ಎಸ್.ಬಿ. ಶಿವರಾಜ ದೇಶಮುಖ ಪ.ಪೂ. ಕಾಲೇಜಿನಲ್ಲಿ ನಡೆದ ಧ್ವಜ ಚೀಟಿ ಬಿಡುಗಡೆ ಕಾರ್ಯಕ್ರಮದಲ್ಲಿ ಶ್ರೀ ಎಸ್.ಬಿ. ದೇಶಮುಖ, ಶ್ರೀ ಮಾಂಗಿಲಾಲ ಜೈನ್, ಶ್ರೀ ಸುಧಾಕರ ಗುಡಿ, ಶ್ರೀ ಚಂದ್ರಶೇಖರ ವೈದ್ಯ ಹಾಗೂ ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.



ಡಿಸೆಂಬರ್ 11 ರಂದು ಕೋಲಾರ ಜಿಲ್ಲೆ ಬಂಗಾರಪೇಟೆ ಆಶ್ಲೆ ನ್ಯಾಷನಲ್ ಶಾಲೆಯಲ್ಲಿ ಕಬ್-ಬುಲ್‌ಬುಲ್ ಹಾಗೂ ಸ್ಕೌಟ್-ಗೈಡ್ ಘಟಕಗಳನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ ಉದ್ಘಾಟಿಸಿ ಮಾತನಾಡುತ್ತಿರುವುದು. ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಹಾಗು ಕ್ಷೇತ್ರ ಶಿಕ್ಷಣಾಧಿಕಾರಿಗಳು ಕಾರ್ಯಕ್ರಮದಲ್ಲಿ ಭಾಗವಹಿಸದ್ದರು.




## 2019 ರ ಹೊಸ ವರ್ಷದ ಹಾಗೂ ಸಂಕ್ರಾಂತಿ ಹಬ್ಬದ ಶುಭಾಶಯಗಳು




ದೂ: 080-2226 0017, 2226 7470
ನಮ್ಮ ಸಂಸ್ಥೆಯ ವೆಬ್‌ಸೈಟ್:
www.bsgkarnataka.org
ನಮ್ಮ ಸಂಸ್ಥೆಯ ಫೇಸ್‌ಬುಕ್:
The Bharat Scout-Guide, karnataka

ಸಂಚಿಕೆಯ ವಾರ್ಷಿಕ ಚಂದಾ ರೂ. 100/-

ವಿದ್ಯಾಸಂಸ್ಥೆ ಹಾಗೂ ಸಂಘ-ಸಂಸ್ಥೆಗಳಿಗೆ
ವಾರ್ಷಿಕ ಚಂದಾ ರೂ.100/- ಚಂದಾಹಣವನ್ನು
ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ #39
ಅರಮನೆ ರಸ್ತೆ, ಬೆಂಗಳೂರು-560 001
ಇಲ್ಲಿಗೆ ಕಳುಹಿಸಲು ಕೋರಿದೆ.


### ಪರಿವಿಡಿ







# ರಾಜ್ಯ ಮುಖ್ಯ ಆಯುಕ್ತರ ನುಡಿ

ನನ್ನ ಪ್ರೀತಿಯ ಸ್ಕೌಟ್ಸ್ ಮತ್ತು ಗೈಡ್ಸ್ ಗೆಳೆಯರೆ,
ಸಸ್ನೇಹ ನಮಸ್ಕಾರಗಳು

**'ಸಿಂಹಾವಲೋಕನ'** ಎಂಬ ಪದವನ್ನು ನೀವು ಕೇಳಿರಬಹುದು. ಕಾಡಿನ ರಾಜ ಎಂದು ಕರೆಸಿಕೊಳ್ಳುವ ಸಿಂಹವು ಕೆಲವು ಹೆಜ್ಜೆಗಳನ್ನು ಹಾಕಿದ ನಂತರ, ನಿಂತುಕೊಂಡು ಮುಂದೆ-ಹಿಂದೆ, ಅತ್ತ-ಇತ್ತ ಅವಲೋಕಿಸಿ ತನ್ನ ಮುಂದಿನ ಹೆಜ್ಜೆಯನ್ನು ಇಡುತ್ತದೆ. ಬಹುಶಃ ಮುಂದೆ ಸಾಗುವಾಗ ಇರಬಹುದಾದ ಅವಕಾಶಗಳು ಮತ್ತು ಅಪಾಯಗಳನ್ನು ಸಿಂಹವು ಗ್ರಹಿಸಬಹುದು. ನಾವು ಪ್ರತಿಯೊಬ್ಬರೂ ಇಂತಹ ಅವಲೋಕನವನ್ನು ಮಾಡಿಕೊಳ್ಳಬೇಕು. ಸಂಸ್ಥೆಗಳೂ ಮಾಡಬೇಕು. ಮಾಡಿದ್ದೇನು, ಮಾಡಬೇಕಾದ್ದೇನು ಎಂಬುದರ ವಿಶ್ಲೇಷಣೆ ನಮ್ಮ ಬೆಳವಣಿಗೆಗೆ ಪೂರಕವಾಗಿರುತ್ತದೆ. ಈ ಮಾತುಗಳನ್ನು ಹೇಳಲು ಕಾರಣಗಳಿವೆ. 2018ನೆಯ ಇಸವಿಯು ಮುಕ್ತಾಯಕ್ಕೆ ಬರುತ್ತಿದೆ. ಹೊಸವರ್ಷ 2019ನ್ನು ಸ್ವಾಗತಿಸುವ ಸಂದರ್ಭದಲ್ಲಿ ವೈಯಕ್ತಿಕವಾಗಿ ಮತ್ತು ಸಾಂಸ್ಥಿಕವಾಗಿ ಸಿಂಹಾವಲೋಕನ ಮಾಡಿಕೊಳ್ಳುವ ಸಂಧಿ ಸಮಯವಿದು.




ಕಳೆದ ವರ್ಷದ ಸಾಧನೆಗಳಲ್ಲಿ ಪ್ರಮುಖವಾದದ್ದು, ಹೆಚ್ಚಿರುವ ನಮ್ಮ ಜನಸಂಪರ್ಕ. ಕರ್ನಾಟಕದ ಜನರ ಕಣ್ಣಿಗೆಮತ್ತು ಮನಸ್ಸಿಗೆ ನಾವು ಕಾಣಿಸುವಂತಹ ಕಾರ್ಯಕ್ರಮಗಳನ್ನು ನಡೆಸಿದೆವು. ಉಡುಪಿಯಲ್ಲಿ ನಡೆದ ಪರ್ಯಾಯ, ಶ್ರವಣಬೆಳಗೊಳದಲ್ಲಿ ನಡೆದ ಮಹಾಮಸ್ತಕಾಭಿಷೇಕ ನಮ್ಮ ಸೇವೆಯನ್ನು ವಿಸ್ತರಿಸಲು ಅಪೂರ್ವ ಅವಕಾಶವನ್ನು ಒದಗಿಸಿತು. ಕೊಡಗು ಜಿಲ್ಲೆಯ



ನೈಸರ್ಗಿಕ ಹಾನಿಯ ಸಂದರ್ಭದಲ್ಲಿ ನಮ್ಮ ರೋವರ್ಸ್-ಮತ್ತು ರೇಂಜರ್ಸ್‌ಗಳು ಹಗಲಿರುಳು ಸೇವೆಯನ್ನು ಸಲ್ಲಿಸಿದರು. ಅಲ್ಲದೆ, ಕರ್ನಾಟಕದ ಎಲ್ಲಾ ಭಾಗಗಳಿಂದ ಹಣ ಸಂಗ್ರಹಣೆ ಮಾಡಿ ಪರಿಹಾರನಿಧಿಗೆ ನೀಡಲಾಯಿತು. ರಾಜಕೀಯ, ಧಾರ್ಮಿಕ ಮತ್ತು ಸಾಮಾಜಿಕ ನಾಯಕರುಗಳು ನಮ್ಮ ಸೇವಾಕಾರ್ಯವನ್ನು ಗುರುತಿಸಿದ್ದಾರೆ.

ಮುಖ್ಯ ಮಂತ್ರಿಗಳಾದ ಸನ್ಮಾನ್ಯ ಶ್ರೀ ಹೆಚ್.ಡಿ. ಕುಮಾರಸ್ವಾಮಿರವರ ನೇತೃತ್ವದಲ್ಲಿರುವ ಕರ್ನಾಟಕ ರಾಜ್ಯ ಸರ್ಕಾರವು, ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಅಗತ್ಯವನ್ನು ಚೆನ್ನಾಗಿ ಮನಗಂಡಿದೆ. ಸಂಸ್ಥೆಯ ಬೆಳವಣಿಗೆಗೆ ಅನುಕೂಲವಾಗುವಂತಹ ತೀರ್ಮಾನಗಳನ್ನು ರಾಜ್ಯ ಸಂಪುಟವು ತೆಗೆದುಕೊಂಡಿದೆ. ಕರ್ನಾಟಕದ ಎಲ್ಲಾ ಶಾಲಾ-ಕಾಲೇಜುಗಳಲ್ಲಿ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್ ಘಟಕಗಳನ್ನು ತೆರೆಯಬೇಕೆಂದು ನಿರ್ದೇಶನವನ್ನು ಸರ್ಕಾರವು ನೀಡಿದೆ. ಅಲ್ಲದೆ, ಎಲ್ಲಾ ಜಿಲ್ಲೆ ಹಾಗೂ ತಾಲ್ಲೂಕುಗಳಲ್ಲಿ ನೋಡೆಲ್ ಅಧಿಕಾರಿಗಳನ್ನು ನೇಮಿಸುವ, ಪಂಚಾಯ್ತಿ ಮಟ್ಟದಲ್ಲೂ ಆರ್ಥಿಕ ನೆರವನ್ನು ಒದಗಿಸುವ ತೀರ್ಮಾನವನ್ನು ಕೈಗೊಂಡಿದೆ. ಜೂನ್ ತಿಂಗಳಿನಲ್ಲಿ ಸ್ವತ: ಮುಖ್ಯ ಮಂತ್ರಿಗಳೇ ಸ್ಕೌಟ್ಸ್ ಸಂಸ್ಥೆಯ ಬಗ್ಗೆ ವಿಶೇಷ ಸಭೆಯನ್ನು ಏರ್ಪಡಿಸಿದ್ದು, ನಮ್ಮ ಬೆಳವಣಿಗೆಯಲ್ಲಿ ಪ್ರಮುಖ ಹೆಜ್ಜೆಯಾಗಿದೆ. ಅಲ್ಲದೆ, ಶ್ರೀ ಕುಮಾರಸ್ವಾಮಿರವರು ಸೆಪ್ಟೆಂಬರ್ 19ರಂದು 100ನೆಯ ರಾಜ್ಯ ಪರಿಷತ್ತಿನ ಸಭೆಯಲ್ಲಿ ಭಾಗವಹಿಸಿ ನಮಗೆ ಸಾಂಘಿಕ ಬಲವನ್ನು ತುಂಬಿದ್ದಾರೆ.





ಮತ್ತೊಂದು ಪ್ರಮುಖ ಘಟನೆಯೆಂದರೆ, ಭಾರತದ ಉಪರಾಷ್ಟ್ರಪತಿಗಳಾದ ಸನ್ಮಾನ್ಯ ಶ್ರೀ ಎಂ. ವೆಂಕಯ್ಯನಾಯ್ಡು ರವರು ಅಕ್ಟೋಬರ್ 09ರಂದು ಶ್ರೀ ವಿ.ಪಿ. ದೀನದಯಾಳು ನಾಯ್ಡು ಅವರ ಜನ್ಮಶತಮಾನೋತ್ಸವ ಸಮಾರೋಪ ಸಮಾರಂಭದಲ್ಲಿ ಭಾಗವಹಿಸಿ, ದೇಶದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿ ವೇಗವಾಗಿ ಬೆಳೆಯಬೇಕಾದ ಅಗತ್ಯವನ್ನು ಒತ್ತಿ ಹೇಳಿದ್ದಾರೆ. ಕೇಂದ್ರ ಸರ್ಕಾರವು ಸೂಕ್ತ ಆದೇಶವನ್ನು ನೀಡಲು ಅನುವು ಮಾಡುವುದಾಗಿ ಹೇಳಿದ್ದಾರೆ. ನಮ್ಮ ಚಟುವಟಿಕೆಗಳನ್ನು ಸಮಾರಂಭದಲ್ಲಿ ಮುಕ್ತ ಕಂಠದಲ್ಲಿ ಹೊಗಳಿದರು. ಕರ್ನಾಟಕದ ಘನವೆತ್ತ ರಾಜ್ಯಪಾಲರಾದ ಶ್ರೀ ವಾಜುಭಾಯಿ ವಾಲಾ ಮತ್ತು ಕರ್ನಾಟಕ ಹಾಗೂ ಕೇಂದ್ರ ಸರ್ಕಾರದ ಸಚಿವ ಸಂಪುಟದ ಹಲವಾರು ಸದಸ್ಯರು ಭಾಗವಹಿಸಿದ್ದಾರೆ. ಶಾಸಕರು, ಹಿರಿಯ ಅಧಿಕಾರಿಗಳು, ಜನನಾಯಕರುಗಳು ನಮ್ಮ ಕಾರ್ಯಕ್ರಮದಲ್ಲಿ ಭಾಗವಹಿಸಿರುವುದು ನಿಜಕ್ಕೂ ಹೆಮ್ಮೆಯ ವಿಷಯ.

ರಾಜ್ಯ ಪರಿಷತ್ತಿನ 100 ನೆಯ ಸಭೆ ನಿಜಕ್ಕೂ ಹೆಮ್ಮೆಯ ಮೈಲುಗಲ್ಲು. ಅಂತೆಯೇ ಮುದ್ದೇನಹಳ್ಳಿಯಲ್ಲಿ ನವೆಂಬರ್ 1 ರಿಂದ 5ನೇ ತಾರೀಖಿನವರೆಗೆ ನಡೆದ ರಾಷ್ಟ್ರೀಯ ರೋವರ್ಸ್-ರೇಂಜರ್ಸ್ ಮೂಟ್‌ನ ಮೂಲಕ ರೋವರ್ಸ್-ರೇಂಜರ್ಸ್ ಚಳವಳಿಯ 100ನೇ ವರ್ಷಾಚರಣೆಯನ್ನು ಮಾಡಿದೆವು.

ಮತ್ತೊಂದು ಹೆಮ್ಮೆಯ ಹಾಗೂ ಸಂತಸದ ವಿಷಯವೆಂದರೆ ರಾಷ್ಟ್ರಮಟ್ಟದಲ್ಲಿ ಒಂಬತ್ತು ಪ್ರಶಸ್ತಿಗಳನ್ನು ನಮ್ಮ ರಾಜ್ಯ ಸಂಸ್ಥೆಯು ಗಳಿಸಿರುವುದು. ಈ ಪ್ರಶಸ್ತಿಗಳನ್ನು ಡಿಸೆಂಬರ್ 01ರಂದು ನಡೆದ ರಾಷ್ಟ್ರೀಯ ಪರಿಷತ್ ಸಭೆಯಲ್ಲಿ ನೀಡಲಾಯಿತು. ಈ ಸಾಧನೆಯು ಒಬ್ಬಿಬ್ಬರಿಂದಲ್ಲ ಆಗುವುದಿಲ್ಲ, ಇದು ಒಂದು ಗುಂಪು ಕೆಲಸ. ದಳನಾಯಕ/ಕಿಯರು, ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು, ಅನೇಕ ಸ್ವಯಂಸೇವಕರು, ರಾಜ್ಯ ಸಂಸ್ಥೆಯ ಸಿಬ್ಬಂದಿವರ್ಗ ಇವರೆಲ್ಲರ ಆಸಕ್ತಿ ಮತ್ತು ಪರಿಶ್ರಮದಿಂದ ಇದು ಸಾಧ್ಯವಾಗಿದೆ. ಇವರೆಲ್ಲರಿಗೂ ನನ್ನ ಹೃತ್ಪೂರ್ವಕ ಅಭಿನಂದನೆಗಳು. ಆದರೆ ಈ ಪ್ರಶಸ್ತಿಗಳು ನಮ್ಮೆಲ್ಲರ ಜವಾಬ್ದಾರಿಯನ್ನು ಮತ್ತಷ್ಟು ಹೆಚ್ಚಿಸಿದೆ ಎಂಬುದನ್ನು ಅರಿತುಕೊಳ್ಳಬೇಕಾಗಿದೆ. ಇದನ್ನು ಅರಿತು ಮುಂದಿನ ದಿನಗಳಲ್ಲಿ ಮತ್ತಷ್ಟು ಪ್ರಶಸ್ತಿಗಳನ್ನು ಗಳಿಸುವ ನಿಟ್ಟಿನಲ್ಲಿ ಪ್ರಯತ್ನಿಸೋಣ.

ನಮ್ಮ ಗಣತಿಯನ್ನು ಹೆಚ್ಚಿಸಿಕೊಳ್ಳಲು ಬೇಕಾದ ಅಧೋರಚನೆಯನ್ನು ನಾವೀಗ ಸಿದ್ಧಗೊಳಿಸಿದ್ದೇವೆ. ಈ ಕಾರ್ಯಕ್ಕೆ ಅಗತ್ಯವಾದ ಸಿಬ್ಬಂದಿ ಮತ್ತು ಸ್ವಯಂ ಸೇವಕರನ್ನು ಎಲ್ಲಾ ಜಿಲ್ಲೆಗಳಲ್ಲಿ ನೇಮಕಗೊಳಿಸುತ್ತಿದ್ದೇವೆ. ಸ್ಥಳೀಯ / ತಾಲ್ಲೂಕು ಮತ್ತು ಜಿಲ್ಲಾ ಸಂಸ್ಥೆಗಳು ಈ ಅವಕಾಶವನ್ನು ಸದುಪಯೋಗಪಡಿಸಿಕೊಂಡು ನಮ್ಮ ಗಣತಿಯನ್ನು ಹತ್ತುಲಕ್ಷದತ್ತ ಕೊಂಡೊಯ್ಯಬೇಕು. ತರಬೇತಿಗಳು, ಸಂಸ್ಥೆಯ ಆಧಾರಗಳಾಗಿವೆ. ವೇಳಾಪಟ್ಟಿಯಂತೆ ಎಲ್ಲಾ ಕೇಂದ್ರಗಳಲ್ಲಿ ಹಲವಾರು ತರಬೇತಿ ಕಾರ್ಯಕ್ರಮಗಳು ಸತತವಾಗಿ ನಡೆಯುತ್ತಿವೆ. ಅಂತಾರಾಷ್ಟ್ರೀಯ / ರಾಷ್ಟ್ರೀಯ ತರಬೇತಿಗಳಲ್ಲಿ ನಮ್ಮ ಸಂಸ್ಥೆಯ ಸದಸ್ಯರು ಭಾಗವಹಿಸುತ್ತಿರುವುದು ಹೆಮ್ಮೆಯ ವಿಷಯವಾಗಿದೆ. ಈ ತಿಂಗಳಿನಿಂದ ನಾವು ದೊಡ್ಡಬಳ್ಳಾಪುರದ ಡಾ॥ ಅನಿಬೆಸೆಂಟ್ ತರಬೇತಿ ಕೇಂದ್ರದಲ್ಲಿ ನಿರಂತರ ಸ್ಕೌಟ್ಸ್-ಗೈಡ್ಸ್ ಶಿಕ್ಷಕ-ಶಿಕ್ಷಕಿಯರ ತರಬೇತಿಯನ್ನು ಆರಂಭಿಸಿದ್ದೇವೆ. ಪ್ರಶಿಕ್ಷಕರೊಬ್ಬರು ಅಲ್ಲಿಯೇ ಇರುತ್ತಾರೆ.

2018ರಲ್ಲಿ ರೋವರ್ಸ್-ರೇಂಜರ್ಸ್ ಚಟುವಟಿಕೆಗಳ ವಿಸ್ತರಣೆಗೆ ಹೆಚ್ಚಿನ ಗಮನವನ್ನು ನಾವು ನೀಡಿದ್ದೇವೆ. ವಿಭಾಗೀಯ ಮಟ್ಟದ ಶಿಕ್ಷಣಾಧಿಕಾರಿಗಳ ಸಮಾವೇಶ, ಮಾಹಿತಿ ಶಿಬಿರ, ಸ್ಥಳೀಯ ಸಂಸ್ಥೆಗಳ ಕಾರ್ಯದರ್ಶಿ ಮತ್ತು ಇತರೆ ಪದಾಧಿಕಾರಿಗಳ ರಾಜ್ಯ ಮಟ್ಟದ ಸಮಾವೇಶ ಮುಂತಾದ ಹಲವಾರು ಕಾರ್ಯಕ್ರಮಗಳನ್ನು ನಾವು ಯೋಜಿಸಿದ್ದೇವೆ.

"ಕರ್ನಾಟಕ ದರ್ಶನ"ದ ಕಾರ್ಯಕ್ರಮವು ಯಶಸ್ವಿಯಾಗಿ ಎಲ್ಲಾ ಜಿಲ್ಲೆಗಳಲ್ಲಿಯೂ ನಡೆಯುತ್ತಿದೆ. ನಮ್ಮ ಮಕ್ಕಳು ಕರ್ನಾಟಕದ ಉದ್ದಗಲಕ್ಕೂ ಪ್ರವಾಸ ಮಾಡುತ್ತಾ, ಕರ್ನಾಟಕದ ಸಂಸ್ಕೃತಿ, ಕಲೆ, ಜನಜೀವನ, ಭಾಷಾ ವೈವಿಧ್ಯತೆಯನ್ನು ಅರಿಯುತ್ತಿದ್ದಾರೆ. ಮಕ್ಕಳ ಮುಂದಿನ ಬದುಕಿಗೆ ಜೀವನಾನುಭವವನ್ನು ಪ್ರವಾಸವು ಒದಗಿಸುತ್ತದೆ. ಜಿಲ್ಲಾ ಸಂಸ್ಥೆಗಳು ಬಹಳ ಜವಾಬ್ದಾರಿಯಿಂದ ಅಚ್ಚುಕಟ್ಟಾಗಿ ಕರ್ನಾಟಕ ದರ್ಶನವನ್ನು ವ್ಯವಸ್ಥೆ ಮಾಡಬೇಕೆಂದು ನನ್ನ ಆಶಯ.



ಇಷ್ಟೆಲ್ಲಾ ಸಾಧನೆಗಳ ನಡುವೆ ನಾವು ಸಾಧಿಸಬೇಕಾದ ಗುರಿ ದೂರವೇ ಇದೆ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಸಂಸ್ಥೆಯನ್ನು ಶಾಲಾ ಮಟ್ಟದಿಂದ ವಿಶ್ವವಿದ್ಯಾನಿಲಯಗಳ ಮಟ್ಟದವರೆಗೆ ವಿದ್ಯಾರ್ಥಿಗಳ ಪ್ರೀತಿಯ ಸಂಘಟನೆಯನ್ನಾಗಿ ಮಾಡಬೇಕು. ವ್ಯಕ್ತಿತ್ವ ವಿಕಸನ, ಸೇವೆ, ಸರ್ವಧರ್ಮ ಸಮಭಾವ, ನ್ಯಾಯಪರತೆ ಮುಂತಾದ ಅನುಕರಣೀಯ ಗುಣಗಳನ್ನು ವಿದ್ಯಾರ್ಥಿಗಳಲ್ಲಿ ರೂಢಿಸುವುದು ನಮ್ಮ ಕಾರ್ಯವಾಗಿದೆ.



ಈ ಕಾರ್ಯದಲ್ಲಿ ಕೈಜೋಡಿಸಲು ಸರ್ಕಾರ, ಸಮಾಜದ ಹಿರಿಯರು ಸಿದ್ಧವಿದ್ದಾರೆ. ಆದರೆ, ನಾವು ಇನ್ನೂ ಹೆಚ್ಚು ಸ್ಪಂದಿಸಬೇಕು ಎಂದು ನನಗನ್ನಿಸುತ್ತದೆ. 2019ರಲ್ಲಿ ನಿಮ್ಮಿಂದ ಇನ್ನೂ ಹೆಚ್ಚಿನ ಸಹಕಾರವನ್ನು ನಾನು ಬಯಸುತ್ತೇನೆ.

2016 ನೆಯ ವರ್ಷದ ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್ಸ್ ಪುರಸ್ಕೃತರ ಫಲಿತಾಂಶವನ್ನು ಘೋಷಿಸಲಾಗಿದೆ. ಆದರೆ, ಪ್ರಮಾಣ ಪತ್ರವನ್ನು ಇನ್ನೂ ನೀಡಿಲ್ಲ. ಭಾರತದ ಘನವೆತ್ತ ರಾಷ್ಟ್ರಪತಿಗಳು ಪ್ರಮಾಣ ಪತ್ರಗಳನ್ನು ನೀಡುತ್ತಾರೆ. ಈ ಕಾರ್ಯಕ್ರಮವು ಜರುಗಿಲ್ಲ. 2017ರ ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್ಸ್ ಪುರಸ್ಕಾರದ ಪರೀಕ್ಷೆಗಳು ಜರುಗಿವೆ. ಆದರೆ ಫಲಿತಾಂಶವು ಇನ್ನೂ ಬಂದಿಲ್ಲ. ಇದು ಸಂಧಿಗ್ದ ಪರಿಸ್ಥಿತಿಯನ್ನು ನಿರ್ಮಾಣ ಮಾಡಿದೆ. ಪುರಸ್ಕೃತರಾದ ಮಕ್ಕಳು ಸಿ.ಇ.ಟಿ. ಮತ್ತು ಎನ್.ಇ.ಇ.ಟಿ. ಪರೀಕ್ಷೆಗಳಿಗೆ ತಮ್ಮ ಪ್ರಮಾಣ ಪತ್ರಗಳನ್ನು ಲಗತ್ತಿಸಲು ಸಾಧ್ಯವಾಗಿಲ್ಲ.

2018ನೇ ಸಾಲಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ಪೂರ್ವಸಿದ್ಧತಾ ತರಬೇತಿ ಶಿಬಿರಗಳು ಜರುಗಿವೆ. ಕೇಂದ್ರ ಸಂಸ್ಥೆಗೆ ಅರ್ಜಿಗಳನ್ನು ಕಳುಹಿಸಿಕೊಟ್ಟಿದ್ದೇವೆ. ಪರೀಕ್ಷೆಗಳು ಕೇಂದ್ರ ಸಂಸ್ಥೆಯು ನಿರ್ಧರಿಸುವ ವೇಳಾಪಟ್ಟಿಯಂತೆ ನಡೆಯುತ್ತದೆ ಎಂದು ನಾನು ಭಾವಿಸಿದ್ದೇನೆ. ಈ ಸಮಸ್ಯೆಗಳ ಬಗ್ಗೆ ನಾನು ಈಗಾಗಲೇ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಷ್ಟ್ರೀಯ ಅಧ್ಯಕ್ಷರಾದ ಡಾ॥ ಅನಿಲ್ ಕುಮಾರ್ ಜೈನ್ ಮತ್ತು ಮುಖ್ಯ ರಾಷ್ಟ್ರೀಯ ಆಯುಕ್ತರಾದ ಡಾ॥ ಕೆ.ಕೆ.ಖಂಡೇಲ್‌ವಾಲ್ ಅವರುಗಳೊಂದಿಗೆ ಚರ್ಚಿಸಿದ್ದೇನೆ. ಕರ್ನಾಟಕದಿಂದ ಹಲವಾರು ಪತ್ರಗಳನ್ನು ಕಳುಹಿಸಿದ್ದೇವೆ. ಘನವೆತ್ತ ರಾಷ್ಟ್ರಪತಿಗಳ ಬಳಿಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕೇಂದ್ರ ಸಂಸ್ಥೆಯಿಂದ ಅತೀ ಶೀಘ್ರದಲ್ಲಿ ನಿಯೋಗವನ್ನು ಕೊಂಡೊಯ್ದು ಈ ಎಲ್ಲಾ ವಿಷಯಗಳ ಬಗ್ಗೆ ಚರ್ಚಿಸಿ ಯುಕ್ತವಾದ ಪರಿಹಾರವನ್ನು ಕಂಡುಕೊಳ್ಳುತ್ತೇವೆ. ಆದ್ದರಿಂದ ಪೋಷಕರಾಗಲಿ, ಸ್ಕೌಟ್ಸ್ ಮತ್ತು ಗೈಡ್ಸಗಳಾಗಲಿ ಆತಂಕಪಡುವ ಅಗತ್ಯವಿಲ್ಲ.

ಕಬ್ಸ್ / ಬುಲ್‌ಬುಲ್ಸ್ /ಸ್ಕೌಟ್ಸ್ / ಗೈಡ್ಸ್ / ರೋವರ್ಸ್ ಮತ್ತು ರೇಂಜರ್ಸ್ ಮಕ್ಕಳನ್ನು ಭೇಟಿ ಮಾಡುವುದೆಂದರೆ ನನಗೆ ಬಹಳ ಆನಂದದ ವಿಷಯ. ಅವರ ಚಟುವಟಿಕೆಗಳಲ್ಲಿ, ತರಬೇತಿಗಳಲ್ಲಿ ಪಾಲ್ಗೊಳ್ಳುವುದು ನನಗೆ ಹೆಮ್ಮೆ . ಹೀಗಾಗಿ 2018ರಲ್ಲಿ ನಾನು ನಮ್ಮ ಮಕ್ಕಳನ್ನು ಭೇಟಿ ಮಾಡಲು, ಮಾತನಾಡಿಸಲು, ಅವರನ್ನು ಪ್ರೋತ್ಸಾಹಿಸಲು ಕರ್ನಾಟಕದಾದ್ಯಂತ ಪ್ರವಾಸ ಮಾಡಿದ್ದೇನೆ. ಪ್ರವಾಸದ ಸಂದರ್ಭದಲ್ಲಿ ಸ್ಥಳೀಯ, ತಾಲ್ಲೂಕು, ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳನ್ನು ಭೇಟಿಯಾಗಿದ್ದೇನೆ. ಈಗ ಜಿಲ್ಲೆಗಳಲ್ಲಿ ಸ್ಕೌಟ್ ಚಳವಳಿಯ ಪರವಾದ ವಾತಾವರಣವಿದೆ. ನಮ್ಮ ಪದಾಧಿಕಾರಿಗಳು ಉತ್ಸಾಹಿತರಾಗಿದ್ದಾರೆ. ಹಾಗಾಗಿ 2019ರಲ್ಲಿ ನಾವು ನಮ್ಮ ಗುರಿಗಳನ್ನು ತಲುಪುತ್ತೇವೆಂಬ ಭರವಸೆ ಇದೆ. ಕಾಲವು ಒಂದು ಅಮೂರ್ತವಾದ ಶಕ್ತಿ. ಅದರ ಹರಿವು ನಿರಂತರ. ಕಾಲದ ಈ ಚಲನಶೀಲ ಶಕ್ತಿಯನ್ನು ಚೈತನ್ಯವಾಗಿ ಪರಿವರ್ತಿಸುವುದು ನಮ್ಮ ಜವಾಬ್ದಾರಿಯಾಗಿದೆ. ಕಾರ್ಯಸಾಧಿಸಿದರೆ ಗೆಲುವು ನಮ್ಮದು. ಇಲ್ಲದಿದ್ದರೆ ಕಾಲವು ಹರಿದು ಹೋಗುತ್ತದೆ.




ಜಗತ್ತಿಗೆ ಶಾಂತಿ, ಸ್ನೇಹ, ಸೇವೆಯ ಸಂದೇಶವನ್ನು ನೀಡಿದ ಕ್ರಿಸ್‌ಮಸ್ ಹಬ್ಬದ ಶುಭಾಶಯಗಳು. ಹೊಸವರ್ಷ 2019 ನಿಮ್ಮ ವೈಯಕ್ತಿಕ, ಶೈಕ್ಷಣಿಕ, ಔದ್ಯೋಗಿಕ ಜೀವನದಲ್ಲಿ ಹೆಚ್ಚಿನ ಯಶಸ್ಸನ್ನು ತರಲಿ. ನೆಮ್ಮದಿಯು ನಿಮ್ಮ ಬದುಕಿನ ಅಂಗವಾಗಲಿ. ಆರೋಗ್ಯ, ಆನಂದ ನಿಮ್ಮದಾಗಿರಲಿ ಎಂದು ಹಾರೈಸುತ್ತೇನೆ.



ಸುಗ್ಗಿಯ ಹಬ್ಬ ಸಂಕ್ರಾಂತಿ ಮತ್ತೆ ಬಂದಿದೆ. ರಾಜ್ಯದ ರೈತರು ಬರದ ಬೇಗೆಯಲ್ಲಿ ತತ್ತರಿಸುತ್ತಿದ್ದಾರೆ. ಸರ್ಕಾರವು ರೈತರ ನೋವಿಗೆ ಸ್ಪಂದಿಸುತ್ತಿದೆ. ಸಂಕ್ರಾಂತಿ, ನಮ್ಮ ಸಂಸ್ಕೃತಿಯನ್ನು ಬಿಂಬಿಸುವ ಹಬ್ಬವಾಗಿದೆ. ಎಳ್ಳು-ಬೆಲ್ಲವನ್ನು ಹಂಚುವುದು, ಒಳ್ಳೆಯ ಮಾತನಾಡುವುದು, ಮನೆ, ರಾಸು, ಕೃಷಿ ಉಪಕರಣಗಳು ಎಲ್ಲವನ್ನು ಮತ್ತೆ ಬೇಸಾಯಕ್ಕೆ ಸಿದ್ಧಗೊಳಿಸುವ ಸಮಯವಿದು. ನಿಮಗೆಲ್ಲರಿಗೂ ಸಂಕ್ರಾಂತಿಯ ಹೃತ್ಪೂರ್ವಕ ಶುಭಾಶಯಗಳು.



**ನಾವೆಲ್ಲರೂ ಒಗ್ಗಟ್ಟಾಗಿ, ನವ ಜಗತ್ತನ್ನೂ ಭಾರತವನ್ನು ಕಟ್ಟೋಣ.**

ತಮ್ಮ ವಿಶ್ವಾಸಿ

**(ಪಿ.ಜಿ.ಆರ್. ಸಿಂಧ್ಯ)**

**ರಾಜ್ಯ ಮುಖ್ಯ ಆಯುಕ್ತರು**

# ಕರ್ನಾಟಕ ದರ್ಶನ

## ಕಾರ್ಯಕ್ರಮದ ಉದ್ದೇಶಗಳು



2018-19ನೇ ಸಾಲಿಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಮಕ್ಕಳಿಗೆ ಕರ್ನಾಟಕ ದರ್ಶನ ಕಾರ್ಯಕ್ರಮ ಆಯೋಜಿಸಲು ಪ್ರವಾಸೋದ್ಯಮ ಇಲಾಖೆ, ಕರ್ನಾಟಕ ಸರ್ಕಾರ ಅನುದಾನ ಬಿಡುಗಡೆ ಮಾಡಿದೆ. ಕರ್ನಾಟಕ ದರ್ಶನದ ಉದ್ದೇಶಗಳು ಕೆಳಕಂಡಂತಿವೆ.

**ಸಾಮಾನ್ಯ ಉದ್ದೇಶಗಳು :**

* ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳು ಪರಿಪೂರ್ಣವಾಗಿ ರಾಜ್ಯದಲ್ಲಿರುವ ಮುಖ್ಯ ಪ್ರವಾಸಿ ಸ್ಥಳಗಳು, ಅಂದರೆ ಸ್ಥಳೀಯ ವೈಜ್ಞಾನಿಕ, ಧಾರ್ಮಿಕ, ಭೌಗೋಳಿಕ, ನೈಸರ್ಗಿಕ, ಐತಿಹಾಸಿಕ, ವಿಜ್ಞಾನ ಮತ್ತು ಕೈಗಾರಿಕೆಗಳು, ಉತ್ತಮ ಶಾಲೆ, ಆಕಾಶವಾಣಿ ಕೇಂದ್ರ, ಗಣಿಗಳು, ಉದ್ಯಾನವನ, ಮ್ಯೂಸಿಯಂ, ಪ್ರಖ್ಯಾತ ವ್ಯಕ್ತಿಗಳು ಹುಟ್ಟಿದ ಊರು ಇತ್ಯಾದಿಯನ್ನು ಅರಿಯುವುದು.
* ಮಕ್ಕಳು ತಮ್ಮ ಶೈಕ್ಷಣಿಕ ಜೀವನವನ್ನು ರೂಪಿಸಿಕೊಳ್ಳಲು ಸಹಕಾರಿಯಾಗುವಂತೆ ಮಾರ್ಗದರ್ಶನವನ್ನು ಪಡೆಯುವುದು.
* ಮಕ್ಕಳಲ್ಲಿ ಸಹಕಾರ, ಹೊಂದಾಣಿಕೆ, ನಾಯಕತ್ವ ಮನೋಭಾವವನ್ನು ಬೆಳೆಸುವುದು.
* ಕರ್ನಾಟಕ ಸಾಂಸ್ಕೃತಿಕ ಪರಂಪರೆಯ ಅರಿವು ಹಾಗೂ ಅಭಿವೃದ್ಧಿಗೊಳಿಸುವಲ್ಲಿ ಮಕ್ಕಳ ಭಾಗವಹಿಸುವಿಕೆಯನ್ನು ಪ್ರೋತ್ಸಾಹಿಸುವುದು.
* ಕರ್ನಾಟಕದ ಸಾಮಾಜಿಕ ಸ್ಥಿತಿಗತಿಯ ಕುರಿತು ಅರಿವನ್ನು ಉಂಟುಮಾಡುವುದು
* ಮಕ್ಕಳಿಗೆ ನೈಜ ಪರಿಸರದ ದರ್ಶನ ಮಾಡಿಸುವುದು.
* ತರಗತಿ ಕಲಿಕೆಗೆ ಪೂರಕವಾದ ಮಾಹಿತಿ ಒದಗಿಸುವುದು.
* ಶಾಲಾ ಚಟುವಟಿಕೆಗಳನ್ನು, ಹೊರ ಪ್ರಪಂಚ ಹಾಗೂ ಸಮಾಜದೊಂದಿಗೆ ಸಮನ್ವಯಗೊಳಿಸವುದು.
* ಕರ್ನಾಟಕ ಐತಿಹಾಸಿಕ ವಿಷಯಗಳ ನೈಜ ಸ್ಥಿತಿಯ ದರ್ಶನ ಮಾಡಿಸುವುದು
* ಪ್ರಾದೇಶಿಕ ಮಟ್ಟದ ಜನಜೀವನ, ಭಾಷೆ, ಆಚಾರ ವಿಚಾರಗಳಲ್ಲಿನ ವೈವಿಧ್ಯತೆಯ ಅರಿವನ್ನು ಉಂಟುಮಾಡುವುದು

**ನಿರ್ದಿಷ್ಟ ಉದ್ದೇಶಗಳು :**

* ಮಕ್ಕಳು ಶಿಕ್ಷಣದಲ್ಲಿ ಆಸಕ್ತಿ ಬೆಳೆಸಿಕೊಂಡು ಪಠ್ಯೇತರ ಹಾಗೂ ಶೈಕ್ಷಣಿಕ ಚಟುವಟಿಕೆಗಳಲ್ಲಿ ಹೆಚ್ಚು ಉತ್ಸಾಹದಿಂದ ಭಾಗವಹಿಸುವುದು ಹಾಗು ಮಕ್ಕಳು ಶಾಲೆಯತ್ತ ಹೆಚ್ಚು ಆಕರ್ಷಿತರಾಗಿ ಶಾಲೆ ಬಿಡುವ ಸಾಧ್ಯತೆಗಳು ಕಡಿಮೆಯಾಗುವುದು.

* ಆರ್ಥಿಕವಾಗಿ ಹಿಂದುಳಿದ ಮಕ್ಕಳು ಹಾಗೂ ಹೆಣ್ಣು ಮಕ್ಕಳು ರಾಜ್ಯದ ಅನೇಕ ಸ್ಥಳಗಳ ನೈಜ ಪರಿಸರ ದರ್ಶನ ಪಡೆಯಲು ಸಹಕಾರಿಯಾಗುವುದು.
* ಮಕ್ಕಳ ಕೀಳರಿಮೆ ಹೋಗಲಾಡಿಸುವುದು.
* ಮಕ್ಕಳಲ್ಲಿ ಸ್ಪರ್ಧಾತ್ಮಕ ಮನೋಭಾವ ಬೆಳೆಸುವುದು.
* ಮಕ್ಕಳಲ್ಲಿ ಪಠ್ಯವಸ್ತುವಿನ ಸಾಮರ್ಥ್ಯಗಳ ಬೆಳವಣಿಗೆಗೆ ಸಹಕಾರಿಯಾಗುವುದು.
* ವಿದ್ಯಾರ್ಥಿಗಳಲ್ಲಿ ವೀಕ್ಷಣೆ, ಮೌಖಿಕ ಹಾಗೂ ಲಿಖಿತ ಕೌಶಲ್ಯಗಳ ಸಂವರ್ಧನೆ ಮಾಡುವುದು.
* ನೋಡಿ ಕಲಿಯುವುದರಿಂದ ಅನೇಕ ಪರಿಕಲ್ಪನೆಗಳು ಸ್ಪಷ್ಟವಾಗುವುದು.
* ಮಕ್ಕಳ ಯೋಚನಾ ಶಕ್ತಿಯನ್ನು ವಿಶಾಲಗೊಳಿಸುವುದು.
* ರಾಜ್ಯದ ಸಂಸ್ಕೃತಿ, ಕಲೆ, ದೇಶಭಕ್ತಿ, ವೈಚಾರಿಕತೆ ಬಗ್ಗೆ ಅರಿವು ಮೂಡಿಸುವುದು.

## ಜನವರಿ 2019ರ ರಾಜ್ಯಮಟ್ಟದ ಕಾರ್ಯಕ್ರಮಗಳು

| ಕ್ರ.ಸಂ | ಕಾರ್ಯಕ್ರಮಗಳು | ದಿನಾಂಕ | ಸ್ಥಳ |
|---|---|---|---|
| 1 | ರಾಜ್ಯಮಟ್ಟದ ಸ್ಕೌಟ್ಸ್-ಗೈಡ್ಸ್ ಮತ್ತು ರೋವರ್ಸ್-ರೇಂಜರ್ಸ್‌ಗಳ ಮ್ಯಾಪಿಂಗ್ ಹಾಗೂ ಸ್ಟಾರ್ ಗೇಜಿಂಗ್ ತರಬೇತಿ ಶಿಬಿರ | 07 ರಿಂದ 11 ಜನವರಿ 2019ರ ವರೆಗೆ | ಡಾ. ಅನಿಬೆಸೆಂಟ್ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ ದೊಡ್ಡಬಳ್ಳಾಪುರ ಬೆಂ. ಗ್ರಾಮಾಂತರ ಜಿಲ್ಲೆ |
| 2 | ಸ್ಥಳೀಯ ಸಂಸ್ಥೆಗಳ ಕಾರ್ಯದರ್ಶಿ ಜಂಟಿ ಕಾರ್ಯದರ್ಶಿ, ಖಜಾಂಚಿ ಹಾಗೂ ಜಿಲ್ಲಾ ಸಹಾಯಕ ಆಯುಕ್ತರುಗಳ ಸಮಾವೇಶ | 07 ಮತ್ತು 08 ಜನವರಿ 2019 ರಂದು | ಡಾ. ಅನಿಬೆಸೆಂಟ್ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ ದೊಡ್ಡಬಳ್ಳಾಪುರ ಬೆಂ. ಗ್ರಾಮಾಂತರ ಜಿಲ್ಲೆ |
| 3 | ಸ್ವಾಮಿ ವಿವೇಕಾನಂದರ ಜನ್ಮ ದಿನಾಚರಣೆ ಪ್ರಯುಕ್ತ ಸ್ಕೌಟ್ಸ್-ಗೈಡ್ಸ್‌ಗಳಿಗೆ ರಾಜ್ಯಮಟ್ಟದ ದೇಶಭಕ್ತಿ ಗೀತೆಗಳ ಗೀತಗಾಯನ ಸ್ಪರ್ಧೆ ಮತ್ತು ಯುವ ದಿನಾಚರಣೆ ಕಾರ್ಯಕ್ರಮ | 11 ಮತ್ತು 12 ಜನವರಿ 2019 ರಂದು | ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ ಅರಮನೆ ರಸ್ತೆ, ಬೆಂಗಳೂರು |
| 4 | ಸ್ಕೌಟ್ ಮಾಸ್ಟರ್ಸ್-ಗೈಡ್ ಕ್ಯಾಪ್ಟನ್‌ಗಳಿಗೆ ಮುಂದವರೆದ ತರಬೇತಿ ಶಿಬಿರ ಹಾಗೂ ರೋವರ್ ಸ್ಕೌಟ್ ಲೀಡರ್ ಮತ್ತು ರೇಂಜರ್ ಲೀಡರ್‌ಗಳಿಗೆ ಮೂಲ ತರಬೇತಿ ಶಿಬಿರ | 17 ರಿಂದ 23 ಜನವರಿ 2019 ರ ವರೆಗೆ | ಡಾ. ಅನಿಬೆಸೆಂಟ್ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ ದೊಡ್ಡಬಳ್ಳಾಪುರ ಬೆಂ. ಗ್ರಾಮಾಂತರ ಜಿಲ್ಲೆ |
| 5 | ಗಣರಾಜ್ಯೋತ್ಸವ ದಿನಾಚರಣೆ ಪ್ರಯುಕ್ತ ಸ್ಕೌಟ್ಸ್-ಗೈಡ್ಸ್‌ಗಳಿಗೆ ಪಥಸಂಚಲನ ತರಬೇತಿ ಶಿಬಿರ | 19 ರಿಂದ 26 ಜನವರಿ 2019 ರ ವರೆಗೆ | ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ ಅರಮನೆ ರಸ್ತೆ, ಬೆಂಗಳೂರು |

– ರಾಜ್ಯ ಕಾರ್ಯದರ್ಶಿ

# 41ನೇ ಕಬ್ಸ್-ಬುಲ್‌ಬುಲ್ಸ್ ಉತ್ಸವ 2018



ನವೆಂಬರ್ 30 ರಿಂದ ಡಿಸೆಂಬರ್ 4ರ ವರೆಗೆ ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನ ಪುಟ್ಟ ಗ್ರಾಮವಾದ ಮರತುಂಟಿಯ ಶ್ರೀ ಟಿ.ಬಿ. ಗಣಾಚಾರಿ ಕನ್ನಡ ವಸತಿ ಶಾಲೆಯಲ್ಲಿ ರಾಜ್ಯಮಟ್ಟದ 41ನೇ ಕಬ್-ಬುಲ್‌ಬುಲ್ ಉತ್ಸವವು ಜರುಗಿತು.

ಉತ್ಸವವವು ಧ್ವಜಾರೋಹಣದೊಂದಿಗೆ ಪ್ರಾರಂಭವಾಯಿತು. ಈ ಕಾರ್ಯಕ್ರಮದಲ್ಲಿ ರಾಜ್ಯ ಸಂಘಟನಾ ಆಯುಕ್ತರು (ಗೈಡ್) ಶ್ರೀಮತಿ ಸಿ. ಮಂಜುಳಾ ಇವರು ಉಪಸ್ಥಿತರಿದ್ದರು.

ಕಾರ್ಯಕ್ರಮದ ಉದ್ಘಾಟನೆಯನ್ನು ರಾಜ್ಯ ಮುಖ್ಯ ಆಯುಕ್ತರಾದ ಸನ್ಮಾನ್ಯ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ನೆರವೇರಿಸಿದರು. ನಂತರ ಅವರು ಮಾತನಾಡುತ್ತ ಮಕ್ಕಳು ದೇವರ ಸಮಾನ, ಮಕ್ಕಳ ಹೃದಯದಲ್ಲಿ ಒಳ್ಳೆಯ ವಿಚಾರಗಳನ್ನು ಬಿತ್ತಬೇಕು. ಸೌಹಾರ್ದ ಗುಣಗಳನ್ನು ಅವರಿಗೆ ತಿಳಿಸಿಕೊಡಬೇಕೆಂದು ಹೇಳುತ್ತ, 107 ವರ್ಷಗಳ ಹಿಂದೆ ಸ್ಕೌಟ್-ಗೈಡ್ ಸಂಘಟನೆ ಪ್ರಾರಂಭವಾಗಿದ್ದು, ಒಟ್ಟಾರೆ 250 ದೇಶಗಳಲ್ಲಿ ಶಾಂತಿ ಸೌಹಾರ್ದದ ಸಂದೇಶವನ್ನು ಬೀರುತ್ತಿದೆ. ಸುಮಾರು 5 ಕೋಟಿ ಜನ ಸ್ವಯಂ ಸೇವಕರು ಈ ಸಂಘಟನೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ ಎಂದರು.

ಜಿಲ್ಲಾ ಪಂಚಾಯತ್ ಸದಸ್ಯ ಶ್ರೀ ಬಸವರಾಜ ಬಂಡಿ ವಡ್ಡರ, ತಾಲ್ಲೂಕ ಪಂಚಾಯತ್ ಸದಸ್ಯ ಶ್ರೀಕಾಂತ ಸುಂಕದ ಮಾತನಾಡಿ ಗ್ರಾಮೀಣ ವಲಯಗಳಲ್ಲಿ 5 ದಿನಗಳ ಕಾಲ ಇಂತಹ ಶಿಬಿರಗಳನ್ನು ಆಯೋಜಿಸಿ ಮಕ್ಕಳಲ್ಲಿರುವ ಹೊಸಹೊಸ ಪ್ರತಿಭೆಗಳನ್ನು ಹೊರತರಲು ಶ್ರಮಿಸುತ್ತಿರುವುದು ಬಹಳಷ್ಟು ಶ್ಲಾಘನೀಯ ಎಂದರು.

ಉಪನಿರ್ದೇಶಕರು (ಅಭಿವೃದ್ಧಿ) ಹಾಗೂ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಜಿ.ಬಿ. ಮನ್ನಿಕೇರಿ ಅವರು ಮಾತನಾಡುತ್ತ ನಾವು ಮಕ್ಕಳಲ್ಲಿ ಧರ್ಮ, ಜಾತಿ ಎಂಬ ಭಾವನೆಯನ್ನು ಬಿತ್ತಬಾರದು ನಾವೆಲ್ಲರೂ ಒಂದೇ ಭಾರತಾಂಬೆಯ ಮಕ್ಕಳು ಎಂದು ಉತ್ತಮವಾದ ವಿಚಾರಗಳನ್ನು ತಿಳಿಸಬೇಕೆಂದರು

ರಾಜ್ಯ ಸಂಘಟನಾ ಆಯುಕ್ತರು (ಗೈಡ್) ಶ್ರೀಮತಿ ಸಿ. ಮಂಜುಳಾ ಇವರು ಮಾತನಾಡಿ 17 ಜಿಲ್ಲೆಗಳಿಂದ 5 ರಿಂದ 10 ವರ್ಷದ 560 ಮಕ್ಕಳು ಶಿಬಿರದಲ್ಲಿ ಭಾಗವಹಿಸಿದ್ದಾರೆಂದು ಹೇಳುತ್ತ, ಕಬ್-ಬುಲ್‌ಬುಲ್ ಉತ್ಸವವು ಯಶಸ್ವಿಯಾಗಿದೆ ಎಂದರು. ಕಾರ್ಯಕ್ರಮದಲ್ಲಿ ಬೈಲಹೊಂಗಲದ ಬಿ.ಇ.ಓ., ಶ್ರೀಮತಿ ಪಾರ್ವತಿ ವಸ್ತ್ರದ, ಸವದತ್ತಿ ಬಿ.ಇ.ಓ. ಶ್ರೀ ಕೇಶವ ಪೆಟ್ಲೂರ, ಶ್ರೀ ಎಂ.ಬಿ. ಬಳಿಗಾರ, ಶ್ರೀಮತಿ ಶ್ರೀದೇವಿ ನಾಗನೂರ, ಶ್ರೀ ಪ್ರಕಾಶ ಪೂಜಾರಿ ಮುಖ್ಯಾಧ್ಯಾಪಕರಾದ ಶ್ರೀ ಶಿವಾನಂದ ಅಂಬರಶೆಟ್ಟಿ, ಪ್ರಾಚಾರ್ಯ ಡಾ॥ ಸಿ.ಟಿ. ಗಣಾಚಾರಿ ಸಂಸ್ಥೆಯ ಕಾರ್ಯದರ್ಶಿ ಶ್ರೀ ವಿರೂಪಾಕ್ಷಿ ಗಣಾಚಾರಿ ಉಪಸ್ಥಿತರಿದ್ದರು.




ಜಿಲ್ಲಾ ಆಯುಕ್ತರು (ಗೈಡ್) ಶ್ರೀಮತಿ ಪಿ.ಬಿ. ಪಾಟೀಲ್ ಎಲ್ಲ ಅತಿಥಿ ಮಹೋದಯರನ್ನು ಸ್ವಾಗತಿಸಿದರು. ಶ್ರೀ ಸಿ.ವೈ ಹೊಸಮನಿ ನಿರೂಪಿಸಿದರು. ಶ್ರೀ ಸಿ.ವೈ. ತುಬಾಕಿ ವಂದಿಸಿದರು.

ಸಮಾರೋಪ ಸಮಾರಂಭದಲ್ಲಿ ಅಧ್ಯಕ್ಷತೆಯನ್ನು ಶ್ರೀ ಗಜಾನನ ಮನ್ನಿಕೇರಿಯವರು ವಹಿಸಿದ್ದರು. ಶ್ರೀಮತಿ ಪ್ರಭಾವತಿ ಪಾಟೀಲರವರು ಎಲ್ಲ ಅತಿಥಿಗಳನ್ನು ಸ್ವಾಗತಿಸಿ ಸನ್ಮಾನಿಸಿದರು. ಕಾರ್ಯಕ್ರಮದ ಕುರಿತು ನಾಯಕ-ನಾಯಕಿ ಮತ್ತು ವಿದ್ಯಾರ್ಥಿ-ವಿದ್ಯಾರ್ಥಿನಿಯರು ತಮ್ಮ ಅನಿಸಿಕೆಗಳನ್ನು ಹಂಚಿಕೊಂಡರು. ಜಿಲ್ಲಾ ಅಕ್ಷರ ದಾಸೋಹ ನಿರ್ದೇಶಕರಾದ ಶ್ರೀಮಿಲ್ಲಾನಟ್ಟಿಯವರು ಮಾತನಾಡಿ ಕಾರ್ಯಕ್ರಮದ ಯಶಸ್ವಿ ಕುರಿತು ಹರ್ಷ ವ್ಯಕ್ತಪಡಿಸಿದರು. ಬೈಲಹೊಂಗಲ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀಮತಿ ಪಾರ್ವತಿ ವಸ್ತ್ರದರವರು ಮಾತನಾಡಿ ಉತ್ಸವದ ಯಶಸ್ವಿಗೆ ಕಾರಣೀಕರ್ತರಾದವರೆಲ್ಲರನ್ನು ಅಭಿನಂದಿಸಿದರು. ಅಧ್ಯಕ್ಷೀಯ ಭಾಷಣ ಮಾಡಿದ ಶ್ರೀ ಗಜಾನನ ಮನ್ನಿಕೇರಿಯವರು ಮಕ್ಕಳು ಈ ಉತ್ಸವದ ಅಂಶಗಳನ್ನು ತಮ್ಮ ಮನೆ, ಶಾಲೆ ಮತ್ತು ಜೀವನದಲ್ಲಿ ಅಳವಡಿಸಿಕೊಳ್ಳುವ ಕರೆ ಕೊಟ್ಟರು.

ಶ್ರೀ ಮುನಿನಾರಾಯಣಪ್ಪ, ಎಲ್‌ಟಿ.(ಕ), ಕೋಲಾರ ಇವರು ಕಬ್ ವಿಭಾಗದ ನಾಯಕರಾಗಿ ಮತ್ತು ಶ್ರೀಮತಿ ಜಯಶ್ರೀ ಜೋಷಿ, ಎ.ಎಲ್.ಟಿ.(ಬಿ) ಹೊಸಪೇಟೆ ಇವರು ಬುಲ್‌ಬುಲ್ ವಿಭಾಗದ ನಾಯಕರಾಗಿ ಕಾರ್ಯನಿರ್ವಹಿಸಿದರು.

**Wake up! Get busy! You have only one Life - day to Live, to make the best of every minute of it. Not to take things too Seriously, Hut to make the best of what you have got. And to took on life as a game, and the World as a play ground. And let your actions and thoughts be directed by love.**



**- Lord Baden Powell**



# 72ನೇ ರಾಜ್ಯ ಮಟ್ಟದ ಹಿಮಾಲಯ ವೃಕ್ಷಮಣಿಧಾರಕರ ಸಮಾವೇಶ

ನವೆಂಬರ್ 24 ರಿಂದ 26ರ ವರೆಗೆ ಮೂರು ದಿನಗಳ ಕರ್ನಾಟಕದ ಹಿಮಾಲಯ ವೃಕ್ಷಮಣಿಧಾರಕರ ಸಮಾವೇಶವನ್ನು ಕೆ.ಎಸ್.ಎಸ್. ಕಾಲೇಜು ಕುಕ್ಕೆ ಸುಬ್ರಹ್ಮಣ್ಯ ಸುಳ್ಯ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಂಘಟಿಸಲಾಗಿತ್ತು.

ಉದ್ಘಾಟನೆಯನ್ನು ಶ್ರೀ ನಿತ್ಯಾನಂದ ಮುಂಡೂಡಿ, ಅಧ್ಯಕ್ಷರು, ವ್ಯವಸ್ಥಾಪನಾ ಸಮಿತಿ, ಕುಕ್ಕೆ ಶ್ರೀ ಸುಬ್ರಮಣ್ಯ ದೇವಸ್ಥಾನ, ಸುಬ್ರಮಣ್ಯ ಇವರು ನರವೇರಿಸಿದರು. ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ. ಜಿ. ಆರ್ ಸಿಂಧ್ಯಾರವರು ಸಮಾವೇಶದಲ್ಲಿ ಭಾಗವಹಿಸಿದ ಶಿಬಿರಾರ್ಥಿಗಳಿಗೆ ತಮ್ಮ ಕ್ಷೇತ್ರಗಳಲ್ಲಿ ಹೆಚ್ಚಿನ ಪರಿಣಿತಿ ಹೊಂದಿ ಲೀಡರ್ ಟ್ರೈನರ್‌ಗಳಾಗಬೇಕೆಂದು ಸೂಚಿಸಿದರು ಹಾಗೂ ಎಲ್ಲಾ ವೃಕ್ಷಮಣಿಧಾರಕರು ತಮ್ಮ ವ್ಯಾಪ್ತಿಯ, ಸ್ಥಳೀಯ ಹಾಗು ಜಿಲ್ಲೆಗಳ ಸ್ಕೌಟ್/ಗೈಡ್ ಕಾರ್ಯಕ್ರಮ ಮತ್ತು ತರಬೇತಿಗಳಲ್ಲಿ ಭಾಗವಹಿಸಿ ಚಳವಳಿಯನ್ನು ಹೆಚ್ಚಿಸಲು ಕ್ರಿಯಾತ್ಮಕವಾಗಿ ಭಾಗವಹಿಸಲು ಸೂಚಿಸಿದರು. ಕಾರ್ಯಕ್ರಮದಲ್ಲಿ ಶ್ರೀ ಅಶೋಕ್ ನೇಕ್ರಾಜಿ, ಸದಸ್ಯರು, ಸುಳ್ಯ ತಾಲೂಕ್ ಪಂಚಾಯತ್, ಶ್ರೀಮತಿ ಗೀತಾ ನಟರಾಜ್ ರಾಜ್ಯ ಆಯುಕ್ತರು(ಗೈ), ಶ್ರೀಮತಿ ಸುಶೀಲಾ ಹೊಸಮನಿ, ಅಧ್ಯಕ್ಷರು ಗ್ರಾಮ ಪಂಚಾಯತ್, ಸುಬ್ರಮಣ್ಯ ಇವರುಗಳು ಭಾಗವಹಿಸಿದರು.

ಕಾರ್ಯಕ್ರಮದಲ್ಲಿ ಭಾಗವಹಿಸಿದ ಎಲ್ಲಾ ವೃಕ್ಷಮಣಿಧಾರಕರು ತಮ್ಮ ಜಿಲ್ಲೆಗಳ ಪ್ರಗತಿ, ಸ್ಕೌಟ್/ಗೈಡ್ ಚಟುವಟಿಕೆಗಳು ಹಾಗೂ ಇತರೆ ವಿಷಯಗಳ ಬಗ್ಗೆ ರಾಜ್ಯ ಮುಖ್ಯ ಆಯುಕ್ತರ ಸಮ್ಮುಖದಲ್ಲಿ ವಿವರಿಸಿದರು. ಶಿಬಿರದಲ್ಲಿ ರಾಜ್ಯ, ಜಿಲ್ಲೆ, ಸ್ಥಳಿಯ ಸಂಸ್ಥೆ ಹಂತಗಳಲ್ಲಿ ತೊಡಗಿಸಿಕೊಳ್ಳುವ ಕಾರ್ಯಕ್ರಮಗಳು, ಗುಂಪು ಚರ್ಚೆ, ಧ್ವಜಾರೋಹಣಾ, ಇತ್ಯಾದಿ ವಿಷಯಗಳ ಬಗ್ಗೆ ತಿಳಿಸಿಕೊಡಲಾಯಿತು. ಇದೇ ಸಂದರ್ಭದಲ್ಲಿ ಶ್ರೀ ಕುಕ್ಕೆ ಸುಬ್ರಮಣ್ಯ ದೇವಾಲಯ ಮಂಡಲಿಯವರು ಶಿಬಿರಾರ್ಥಿಗಳಿಗೆ ವಿಶೇಷ ಪೂಜೆ, ದರ್ಶನ ಮತ್ತು ಮೂರು ದಿನಗಳ ಪ್ರಸಾದದ ವ್ಯವಸ್ಥೆಯನ್ನ ಅಚ್ಚುಕಟ್ಟಾಗಿ ಏರ್ಪಡಿಸಿದರು.

ಕಾಲೇಜಿನ ಪ್ರಾಂಶುಪಾಲರಾದ ಶ್ರೀ ರಂಗಯ್ಯ ಶೆಟ್ಟಿಗಾರ್, ದಕ್ಷಿಣಕನ್ನಡ ಜಿಲ್ಲಾ ಸಂಸ್ಥೆ ಸ್ಥಾನಿಕ ಆಯುಕ್ತರಾದ, ಶ್ರೀಮತಿ ವಿಮಲಾರಂಗಯ್ಯನವರು ಮತ್ತು ಅವರ ಬಳಗದವರು. ಶ್ರೀ ಉದಯ್ ಕುಮಾರ್ ರೈ, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಮತ್ತು ಶ್ರೀ ಭರತ್‌ರಾಜ್, ಡಿ.ಓ ಮತ್ತು ಕಾಲೇಜಿನ ಇತರ ಸಿಬ್ಬಂದಿಯವರು ಸಮಾವೇಶದ ಯಶಸ್ವಿಯಾಗಿ ಜರುಗುವಲ್ಲಿ ಎಲ್ಲಾ ರೀತಿಯ ಸಹಕಾರ ನೀಡಿದರು.

ಕಾಲೇಜಿನ ರೋವರ್ಸ್ ರೇಂಜರ್ಸ್‌ಗಳ ಸೇವೆ ಮತ್ತು ಅವರುಗಳು ಸಾದರ ಪಡಿಸಿದ ಸಾಂಸ್ಕೃತಿಕ ಕಾರ್ಯಕ್ರಮಗಳಾದ ನಾಟಕ, ನೃತ್ಯ, ಸಂಗೀತ, ಅದ್ಭುತವಾಗಿತ್ತು. ವಿಕಲಚೇತನ ಯುವಕರೊಬ್ಬರು ನೀಡಿದ ಜಾದು ಪ್ರದರ್ಶನ ಮರೆಯಲಾಗದ್ದು.

ಸಮಾರೋಪ ಸಮಾರಂಭದಲ್ಲಿ ಶ್ರೀ ಶಿವರಾಮಯ್ಯ, ಉಪನಿರ್ದೇಶಿಕರು ಸಾ. ಶಿ ಇಲಾಖೆ, ಶ್ರೀ ರಾಮಶೇಷ ಶೆಟ್ಟಿ, ಜಿಲ್ಲಾ ಆಯುಕ್ತರು (ಸ್ಕೌ), ಶ್ರೀಮತಿ ಆಶಾ ತಿಮ್ಮಪ್ಪ, ಸದಸ್ಯರು, ಜಿಲ್ಲಾ ಪಂಚಾಯತ್, ದಕ್ಷಿಣಕನ್ನಡ ಜಿಲ್ಲೆ ಭಾಗವಹಿಸಿದರು.

ಸರ್ವಧರ್ಮ ಪ್ರಾರ್ಥನೆಯ ನಂತರ ಕ್ರೈಸ್ತ, ಹಿಂದು, ಇಸ್ಲಾಮ್ ಧರ್ಮ ಗುರುಗಳು ನೀಡಿದ ಸಂದೇಶದ ಸಾರ ಉತ್ತಮವಾಗಿತ್ತು. ಕಾಲೇಜಿನ ಪ್ರಾಂಶುಪಾಲರು ವಿಶೇಷವಾದ ಆಸಕ್ತಿಯಿಂದ ವಸತಿ ಊಟೋಪಚಾರ, ರಂಗಮಂದಿರ ವ್ಯವಸ್ಥೆ ಅಮೋಘವಾಗಿ ಕಲ್ಪಿಸಿದರು.

ಶ್ರೀ ಎ.ಎಂ. ಶಂಕರ್, ರಾಜ್ಯ ತರಬೇತಿ ಆಯುಕ್ತರು (ಸ್ಕೌ), ಶ್ರೀಮತಿ ಕೆ. ವಿ ಶಾಮಲ, ರಾಜ್ಯ ತರಬೇತಿ ಆಯುಕ್ತರು (ಗೈ)ರವರುಗಳು ಸಮಾವೇಶದ ನೇತೃತ್ವ ವಹಿಸಿದ್ದರು. ಶಿಬಿರದ ನಾಯಕರಾಗಿ ಸ್ಕೌಟ್ ವಿಭಾಗದಿಂದ ಶ್ರೀ ವಿ. ಎಂ ನಾರಾಯಣಸ್ವಾಮಿ, ಎಲ್.ಟಿ (ಸಿ) ಮತ್ತು ಗೈಡ್ ವಿಭಾಗದ ನಾಯಕರಾಗಿ ಶ್ರೀಮತಿ ಅರುಣಮಾಲ, ಎಲ್.ಟಿ(ಗೈ) ಕರ್ತವ್ಯ ನಿರ್ವಹಿಸಿದರು. ಸ್ಕೌಟ್ ವಿಭಾಗದಲ್ಲಿ 92, ಗೈಡ್ ವಿಭಾಗದಲ್ಲಿ 45 ಶಿಬಿರಾರ್ಥಿಗಳು ಸಮಾವೇಶದಲ್ಲಿ ಭಾಗವಹಿಸಿದ್ದರು.

# ಸ್ಕೌಟ್ಸ್-ಗೈಡ್ಸ್ ಮೂಲ ತರಬೇತಿಗಳು

ಪ್ರಾರ್ಥನೆ, ಧ್ವಜಗೀತೆ
ಮರೆಯಲಾಗದ ಸ್ಪೇರ್ ಟೈಮ್ ಆಕ್ಟಿವಿಟಿಗಳು
ಪ್ರತಿಜ್ಞೆ, ನಿಯಮ
ಪಾಲಿಸುವೆವು ನಾವುಗಳು
ಮೋಟೋ, ಲೆಫ್ಟ್ ಹ್ಯಾಂಡ್ ಶೇಕಿಂಗ್
ಗೌರವದಿ ಮಾಡುವೆವು ಸೆಲ್ಯೂಟ್
ರಾಷ್ಟ್ರಗೀತೆ, ಎಸ್ಟಿಮೇಷನ್‌ಗಳು
ಬಾಂಡಿಂಗ್ ಬಂಧಿಸೊ ಹತ್ತಾರು ನಾಟ್‌ಗಳು
ಮರೆಯಬೇಡಿ ಬಿ.ಪಿ. 6 ಎಕ್ಸರ್‌ಸೈಜುಗಳು
ಕೋಲಿಗೆ ಸುತ್ತಿದೆ ನೋಡಿ ರ್‍ಯಾಪಿಂಗ್‌ಗಳು
ಹಗ್ಗಕ್ಕೆ ಹಾಕಿರೊ ಫ್ರ್ಯಾಪಿಂಗ್‌ಗಳು
ಪಾಲಿಸಿ ಮರೆಯದೇ ಫ್ಲಾಗ್ ಪ್ರೊಸೀಜರ್
ತಪ್ಪದೆ ಶಾಲೆಯಲಿ ಮಾಡಿ ಯೂನಿಟ್‌ಗಳು
ಬಳಸಿಕೊಳ್ಳೋಣ ನಮಗೆ ಸಿಗುವ ಚಾನ್ಸುಗಳು
ಎಲ್ಲಾ ಕಡೆ ಬೆಳಗಲಿ ನಮ್ಮ ಶಾಲಾ ಮಕ್ಕಳ ಸಾಹಸಗಳು
ಧರಿಸಿ ನೋಡಿ ಶಿಸ್ತಿನ ಯೂನಿಫಾರಂಗಳು
ಹಾಕಿ ನೋಡಿ ಸ್ಕಾರ್ಫ್ ಬ್ಯಾಡ್ಜುಗಳು
ಬನ್ನಿಗಳು, ಕಬ್‌ಗಳು, ಸ್ಕೌಟ್‌ಗಳು, ರೋವರ್‌ಗಳು
ಬುಲ್‌ಬುಲ್‌ಗಳು, ಗೈಡ್‌ಗಳು, ರೇಂಜರ್‌ಗಳು
ಎಷ್ಟೊಂದಿವೆ ನೋಡಿ ಸೆಕ್ಷನ್‌ಗಳು
ಮತ್ತೆ 'ಅಡ್ವಾನ್ಸ್' ಟ್ರೈನಿಂಗ್‌ಗೆ ಬರೋಣ ನಾವುಗಳು
ಸಧ್ಯಕ್ಕೆ ಎಲ್ಲರಿಗೂ ನನ್ನ ಸುಂದರ ಸವಿನೆನಪುಗಳು.

**ರತ್ನಮ್ಮ ಎಂ.**
ಲೇಡಿ ಸ್ಕೌಟ್ ಮಾಸ್ಟರ್ ಶಿಬಿರಾರ್ಥಿ ಮೂಲತರಬೇತಿ ಶಿಬಿರ
ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಕಲ್ಲುಬಾಳು
ಆನೇಕಲ್ ತಾಲ್ಲೂಕು, ಬೆಂಗಳೂರು ಪೂರ್ವ ಜಿಲ್ಲೆ

# ರಾಜ್ಯಮಟ್ಟದ ರಾಷ್ಟ್ರಪತಿ ಸ್ಕೌಟ್ಸ್-ಗೈಡ್ಸ್ ಪೂರ್ವಸಿದ್ಧತಾ ಹಾಗು ನಿರಂತರ ತರಬೇತಿ ಶಿಬಿರಗಳ ಉದ್ಘಾಟನೆ ಮತ್ತು ದಿ. ಕೊಂಡಜ್ಜಿ ಬಸಪ್ಪನವರ ಜನ್ಮದಿನಾಚರಣೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ವತಿಯಿಂದ ರಾಜ್ಯಮಟ್ಟದ ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್ಸ್ ಪೂರ್ವ ಸಿದ್ದತಾ ಶಿಬಿರ ಡಿಸೆಂಬರ್ 10 ರಿಂದ 14ರ ವರೆಗೆ ಡಾ॥ ಆನಿಬೆಸೆಂಟ್ ಸ್ಕೌಟ್ಸ್ & ಗೈಡ್ಸ್ ತರಬೇತಿ ಕೇಂದ್ರ, ದೊಡ್ಡಬಳ್ಳಾಪುರದಲ್ಲಿ ಏರ್ಪಡಿಸಲಾಗಿತ್ತು. ಶಿಬಿರದ ಉದ್ಘಾಟನಾ ಸಮಾರಂಭ, ಸ್ಕೌಟ್ಸ್-ಗೈಡ್ಸ್ ಶಿಕ್ಷಕ-ಶಿಕ್ಷಕಿಯರ ನಿರಂತರ ತರಬೇತಿ ಕಾರ್ಯಕ್ರಮಗಳ ಉದ್ಘಾಟನೆ ಮತ್ತು ದಿವಂಗತ ಕೊಂಡಜ್ಜಿ ಬಸಪ್ಪನವರ 103ನೇ ಜನ್ಮದಿನಾಚರಣೆ ಕಾರ್ಯಕ್ರಮವನ್ನು ಡಿಸೆಂಬರ್ 11ರಂದು ತರಬೇತಿ ಕೇಂದ್ರದಲ್ಲಿ ಸಂಘಟಿಸಲಾಯಿತು.

ಶ್ರೀ ಪಿ.ಜಿ.ಆರ್. ಸಿಂಧ್ಯಾ, ರಾಜ್ಯ ಮುಖ್ಯ ಆಯುಕ್ತರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಶಿಬಿರದಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್ ಗಳಿಗೆ ಶಿಬಿರದ ಮಹತ್ವವನ್ನು ತಿಳಿಸಿದರು. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಮಂತ್ರಿಗಳಾಗಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕದ ರಾಜ್ಯ ಮುಖ್ಯ ಆಯುಕ್ತರಾಗಿ ದಿ. ಕೊಂಡಜ್ಜಿ ಬಸಪ್ಪನವರು ಸಮಾಜಕ್ಕೆ ನೀಡಿದ ಕೊಡುಗೆಯನ್ನು ಸ್ಮರಿಸಿದರು. ಶ್ರೀಮತಿ ಅರುಣಮಾಲಾ, ಸಹಾಯಕ ರಾಜ್ಯ ತರಬೇತಿ ಆಯುಕ್ತರು (ಗೈ) ರವರ ಸಹಕಾರದಲ್ಲಿ ಡಾ॥ ಆನಿಬೆಸೆಂಟ್ ಸ್ಕೌಟ್-ಗೈಡ್ಸ್ ತರಬೇತಿ ಕೇಂದ್ರ, ದೊಡ್ಡಬಳ್ಳಾಪುರದಲ್ಲಿ ಸ್ಕೌಟ್ಸ್-ಗೈಡ್ಸ್ ಶಿಕ್ಷಕ-ಶಿಕ್ಷಕಿಯರ ನಿರಂತರ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವ ಬಗ್ಗೆ ಮಾಹಿತಿ ನೀಡಿದರು. ಸಮಾರಂಭದ ಮುಖ್ಯ ಅತಿಥಿ ಹಾಗೂ ಮೂರು ಕಾರ್ಯಕ್ರಮಗಳನ್ನು ದೀಪ ಬೆಳಗಿಸುವ ಮುಖಾಂತರ ಉದ್ಘಾಟಿಸಿದ ಮಾನ್ಯ ಮಾಜಿ ರಾಜ್ಯಸಭಾ ಸದಸ್ಯರಾದ ಶ್ರೀ ಹೆಚ್ ಹನುಮಂತಪ್ಪ, ಕೊಂಡಜ್ಜಿ ಬಸಪ್ಪನವರ ಬಹುಮುಖ ವ್ಯಕ್ತಿತ್ವದ ಬಗ್ಗೆ ಸುದೀರ್ಘವಾಗಿ ಮಾತನಾಡಿದರು ಹಾಗು ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳ ಸಮಾಜ ಸೇವೆಯ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರು. ಮಕ್ಕಳ ಹೃದ್ರೋಗ ತಜ್ಞರಾದ ಡಾ॥ ವಿಜಯಲಕ್ಷ್ಮಿ ಬಾಳೆಕುಂದ್ರಿ ಯವರು ಮುಖ್ಯ ಅಥಿತಿಗಳಾಗಿ ಭಾಗವಹಿಸಿ ಮಕ್ಕಳಿಗೆ ಉತ್ತಮ ಆರೋಗ್ಯ, ನಡವಳಿಕೆ, ಸಂಸ್ಕೃತಿ ಬಗ್ಗೆ ಸ್ಲೈಡ್ಸ್‌ಗಳ ಮೂಲಕ ತಿಳುವಳಿಕೆ ನೀಡಿದರು.







ರಾಜ್ಯ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು(ಗೈ), ಶ್ರೀ ಕೆ ಗಂಗಪ್ಪ ಗೌಡ, ರಾಜ್ಯ ಕಾರ್ಯದರ್ಶಿಗಳು ಸಭೆಯಲ್ಲಿ ಮಾತನಾಡಿದರು. ಶ್ರೀಮತಿ ಬಿ. ವಿ. ರಾಮಲತಾ, ಜಂಟಿ ರಾಜ್ಯ ಕಾರ್ಯದರ್ಶಿ(ಗೈ) ಮತ್ತು ಶ್ರೀ ಎಲ್. ಟಿ. ಲೋಕೇಶ್, ಸಹಾಯಕ ರಾಜ್ಯ ಕಾರ್ಯದರ್ಶಿ ಉಪಸ್ಥಿತರಿದ್ದರು. ಶ್ರೀ ಎಂ. ಪ್ರಭಾಕರ್ ಭಟ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌ) ಸ್ವಾಗತಿಸಿದರು. ಶ್ರೀಮತಿ ಮಂಜುಳಾ, ರಾಜ್ಯ ಸಂಘಟನಾ ಆಯುಕ್ತರು(ಗೈ) ಪ್ರಾಸ್ತಾವಿಕ ಮಾತನಾಡಿದರು. ಶ್ರೀಮತಿ ಅರುಣಮಾಲಾ, ಸಹಾಯಕ ರಾಜ್ಯ ಸಂಘಟನಾ ಆಯುಕ್ತರು (ಗೈ) ವಂದಿಸಿದರು. ಶ್ರೀಮತಿ ಶ್ಯಾಮಲಾ, ರಾಜ್ಯ ತರಬೇತಿ ಆಯುಕ್ತರು (ಗೈ) ಸಭಾ ಕಾರ್ಯಕ್ರಮ ನಿರ್ವಹಿಸಿದರು.

ಶಿಬಿರದಲ್ಲಿ ರಾಜ್ಯದ 18 ಜಿಲ್ಲೆಗಳಿಂದ 405 ಸ್ಕೌಟ್ಸ್, 42 ಸ್ಕೌಟರ್ಸ್, 313 ಗೈಡ್ಸ್, 35 ಗೈಡರ್ಸ್ ಭಾಗವಹಿಸಿದ್ದರು. ಶ್ರೀ ವೀರಪ್ಪ ಉಗಾಂಡ ಎ.ಎಲ್.ಟಿ. (ಎಸ್) ಶ್ರೀಮತಿ ಮೈಥಿಲಿರಾವ್ ಎ.ಎಲ್.ಟಿ(ಗೈ) ನಾಯಕರಾಗಿ ಕಾರ್ಯನಿರ್ವಹಿಸಿದ್ದರು. ಶ್ರೀಮತಿ ಬಿ.ಡಿ. ಶಾಂತ ಎಲ್.ಟಿ. (ಗೈ) ಶ್ರೀ ಎನ್. ಶ್ರೀನಿವಾಸನ್ ಎಲ್.ಟಿ.(ಎಸ್.) ಶಿಬಿರದಲ್ಲಿ ಸಂಪನ್ಮೂಲ ವ್ಯಕ್ತಿಗಳಾಗಿ ಸಹಕರಿಸಿದರು.

# ಜಿಲ್ಲಾ ವಾರ್ತೆಗಳು

## ಬಳ್ಳಾರಿ

ಜುಲೈ 7 ರಂದು ಸಂಸ್ಥಾಪನಾ ದಿನಾಚರಣೆಯ ಅಂಗವಾಗಿ ಬಳ್ಳಾರಿ ಜಿಲ್ಲಾಧಿಕಾರಿಗಳು ಮತ್ತು ಸಂಸ್ಥೆಯ ಮಹಾ ಪೋಷಕರಾದ ಶ್ರೀ ರಾಮ್ ಪ್ರಸಾತ್ ಮನೋಹರ್ ರವರು ಧ್ವಜ ಚೀಟಿಗಳನ್ನು ಬಿಡುಗಡೆಗೊಳಿಸಿ ಸಂಸ್ಥೆಗೆ, ಸ್ಕೌಟ್-ಗೈಡ್ ಚಳವಳಿಗೆ ಹಾಗೂ ಮಕ್ಕಳಿಗೆ ಶುಭ ಕೋರಿದರು.

ಈ ಸಮಾರಂಭದಲ್ಲಿ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ವಿಜಯ್ ಸಿಂಹ, ಜಿಲ್ಲಾ ಖಜಾಂಚಿ ಶ್ರೀ ಪ್ರಭಾಕರ್, ಎ.ಎಸ್.ಓ.ಸಿ., ಶ್ರೀಮತಿ ಮಲ್ಲೇಶ್ವರಿ ಜುಜಾರೆ, ಡಿ.ಓ.ಸಿ, ಶ್ರೀ ನಾಗರಾಜ್, ಸ್ಕೌಟ್ಸ್-ಗೈಡ್ಸ್, ಸ್ಕೌಟ್ಸ್ ಮಾಸ್ಟರ್ಸ್ ಮತ್ತು ಗೈಡ್ಸ್ ಕ್ಯಾಪ್ಟನ್‌ಗಳು ಭಾಗವಹಿಸಿದ್ದರು.



## ಬೆಳಗಾವಿ

ನವೆಂಬರ್ 30 ರಂದು ಬೆಳಗಾವಿ ಜಿಲ್ಲಾ ಸಂಸ್ಥೆ ವತಿಯಿಂದ ಜಿಲ್ಲಾ ಮಟ್ಟದ ಮಕ್ಕಳ ಸ್ಕೌಟ್ಸ್-ಗೈಡ್ಸ್ ಜರುಗಿತು. ಶ್ರೀ ಶಿವಬಸವ ಕಲ್ಯಾಣ ಮಂಟಪದಲ್ಲಿ ಉದ್ಘಾಟನಾ ಸಮಾರಂಭ ಜರುಗಿತು. ಸದರಿ ಸಮಾರಂಭದ ಅಧ್ಯಕ್ಷತೆಯನ್ನು ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಗಜಾನನ ಮನ್ನಿಕೇರಿಯವರು ವಹಿಸಿದ್ದರು. ಸಮಾರಂಭದ ಅತಿಥಿ ಮಹೋದಯರನ್ನು



ಬೈಲಹೊಂಗಲ ತಾಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀಮತಿ ಪಾರ್ವತಿ ವಸ್ತ್ರದ ರವರು ಸ್ವಾಗತಿಸಿದರು. ರಾಜ್ಯ ಸಂಘಟನಾ ಆಯುಕ್ತರಾದ ಶ್ರೀಮತಿ ಮಂಜುಳಾ .ಸಿ ಮಾತನಾಡುತ್ತಾ ಸ್ಕೌಟ್ಸ್-ಗೈಡ್ಸ್‌ನ ಚಳವಳಿಯಲ್ಲಿ ಕರ್ನಾಟಕ ರಾಜ್ಯದಲ್ಲಿ ಬೆಳಗಾವಿ ಜಿಲ್ಲೆ ಮುಂಚೂಣಿಯಲ್ಲಿದೆಯೆಂದು ಹೇಳಿದರು. ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ರಾಜ್ಯ ಕೋಶಾಧ್ಯಕ್ಷರಾದ ಶ್ರೀ ಎಸ್.ಡಿ. ಗಂಗಣ್ಣವರ ಮಾತನಾಡುತ್ತ ಗಂಡು ಮೆಟ್ಟಿದ ನಾಡಾದ ಬೈಲಹೊಂಗಲದಲ್ಲಿ ಜಿಲ್ಲಾ ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳ ರ‍್ಯಾಲಿ ನಡೆಸುತ್ತಿರುವುದಕ್ಕೆ ಅಭಿನಂದಿಸಿದರು. ರ‍್ಯಾಲಿಗೆ ಆಗಮಿಸಿದ ಎಲ್ಲ ಮಕ್ಕಳಿಗೂ ಬೆಳಗಿನ ಉಪಹಾರದ ವ್ಯವಸ್ಥೆಯನ್ನು ಶ್ರೀ ಮೆಳವಂಕಿಯವರು ಮಾಡಿದ್ದರು. ಮದ್ಯಾಹ್ನದ ಊಟದ ವ್ಯವಸ್ಥೆಯನ್ನು ಅಕ್ಷರದಾಸೋಹ ನಿರ್ದೇಶಕರಾದ ಶ್ರೀಮತಿ ಶ್ರೀ ದೇವಿ ನಾಗನೂರ ರವರು ಹಾಗೂ ಬೈಲಹೊಂಗಲ ಕ್ಷೇತ್ರ ಶಿಕ್ಷಣಾಧಿಕಾರಿಗಳು ನಿರ್ವಹಿಸಿದರು. ಸವದತ್ತಿ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಕೇಶವ ಪೆಟ್ಲೂರ ವಂದಿಸಿದರು.

ಸದರಿ ರ‍್ಯಾಲಿಯಲ್ಲಿ ಅಖಂಡ ಬೆಳಗಾವಿ ಜಿಲ್ಲೆಯ 15 ತಾಲ್ಲೂಕುಗಳ ಆಯ್ದ ಶಾಲೆಗಳಿಂದ 1000 ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ 100 ಸ್ಕೌಟ್ ಮಾಸ್ಟರ್ಸ್ ಮತ್ತು ಗೈಡ್ ಕ್ಯಾಪ್ಟನ್ಸ್ ರ‍್ಯಾಲಿಯಲ್ಲಿ ಪಾಲ್ಗೊಂಡಿದ್ದರು. ಭಾರತ್ ಸ್ಕೌಟ್ಸ್-ಗೈಡ್ಸ್‌ನ

ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾರವರು ಹಸಿರು ನಿಶಾನೆತೋರಿಸುವುದರೊಂದಿಗೆ ರ್‍ಯಾಲಿಗೆ ಚಾಲನೆ ನೀಡಿದರು.

ಶಿವಬಸವ ಕಲ್ಯಾಣ ಮಂಟಪದಿಂದ ರ್‍ಯಾಲಿಯು ಪ್ರಾರಂಭಗೊಂಡು ಬಸ್ ನಿಲ್ದಾಣ ಹಾಗೂ ಸಂಗೊಳ್ಳಿ ರಾಯಣ್ಣ ವೃತ್ತದ ಮೂಲಕ ಕಿತ್ತೂರು ರಾಣಿ ಚೆನ್ನಮ್ಮ ಸಮಾಧಿಯನ್ನು ತಲುಪಿತು. ರಾಣಿ ಚನ್ನಮ್ಮ ಸಭಾವೇದಿಕೆ-ಯಲ್ಲಿ ಸಮಾರೋಪ ಸಮಾರಂಭ ಜರುಗಿತು. ಸಭೆಯಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾರವರು ಮಾತನಾಡುತ್ತಾ, ಶೂರರು, ಧೀರರು ಮಾತ್ರ ಜೀವನದಲ್ಲಿ ಸಾಧನೆ ಮಾಡಬಲ್ಲರು ಎಂದು ತಿಳಿಸಿದರು. ಬೆಳಗಾವಿ ಜಿಲ್ಲೆ ರಾಜ್ಯದಲ್ಲಿ ಪ್ರಥಮ ಸ್ಥಾನದಲ್ಲಿದ್ದು, ಮಕ್ಕಳಲ್ಲಿ ದೇಶಪ್ರೇಮ, ಶಿಸ್ತು, ಸಾಮಾಜಿಕ ಪ್ರೇರಣೆ, ಪರಿಸರ ಕಾಳಜಿ ಹೊಂದುವಲ್ಲಿ ಸ್ಕೌಟ್-ಗೈಡ್ ಚಳವಳಿ ಮಹತ್ವದ ಪಾತ್ರ ವಹಿಸುತ್ತದೆ. ಕಿತ್ತೂರು ಚೆನ್ನಮ್ಮ ಮತ್ತು ಸಂಗೊಳ್ಳಿ ರಾಯಣ್ಣನವರ ತತ್ವಾದರ್ಶಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳುವಂತೆ ಸ್ಕೌಟ್ಸ್-ಗೈಡ್ಸ್‌ಗಳಿಗೆ ಕರೆ ನೀಡಿದರು.

ಸಮಾರಂಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರು ಹಾಗೂ (ಅಭಿವೃದ್ಧಿ) ಉಪ ನಿರ್ದೇಶಕರಾದ ಶ್ರೀ ಜಿ.ಬಿ. ಮನ್ನಿಕೇರಿ ಮಾತನಾಡುತ್ತ ಈ ರ್‍ಯಾಲಿ ನಡೆಯುವುದಕ್ಕೆ ಸಹಕಾರ ನೀಡಿದ ರಾಜ್ಯ ಸಂಸ್ಥೆಯನ್ನು ಅಭಿನಂದಿಸಿದರು. ವೇದಿಕೆಯಲ್ಲಿ ಗೈಡ್ ವಿಭಾಗದ ಜಿಲ್ಲಾ ಆಯುಕ್ತರಾದ ಶ್ರೀಮತಿ ಪಿ.ಬಿ. ಪಾಟೀಲ, ಬೈಲಹೊಂಗಲ ಬಿ.ಇ.ಓ. ಶ್ರೀಮತಿ ಪಾರ್ವತಿ ವಸ್ತ್ರದ, ಸವದತ್ತಿ ಬಿ.ಇ.ಓ., ಶ್ರೀ ಕೇಶವ ಪೆಟ್ಲೂರ, ತುಳಸಿಕಾಂತ ಖೋಡೆ, ಶ್ರೀಮತಿ ಮಂಜುಳಾಸಿ., ಡಾ. ಸಿ.ಬಿ. ಗಣಾಚಾರಿ, ಶ್ರೀ ಎಂ.ಬಿ. ಬಳಿಗಾರ, ಶ್ರೀ ಸಿ.ವೈ. ತುಬಾಕಿ, ಶ್ರೀ ಎಫ್.ವೈ. ಪೂಜಾರ ಹಾಗೂ ಶ್ರೀಮತಿ ಶ್ರೀದೇವಿ ನಾಗನೂರು ಪಾಲ್ಗೊಂಡಿದ್ದರು. ಶ್ರೀಮತಿ ಪ್ರಭಾವತಿ ಪಾಟೀಲರು ವಂದಿಸಿದರು. ಈ ಕಾರ್ಯಕ್ರಮವನ್ನು ಶ್ರೀ ಸಿ. ವೈ. ಹೊಸಮನಿಯವರು ನಿರೂಪಿಸಿದರು.

* ನವೆಂಬರ್ 30 ರಂದು ಬೆಳಗಾವಿ ಜಿಲ್ಲೆಯ ಬೈಲಹೊಂಗದಲ್ಲಿ ಜರುಗಿದ ಜಿಲ್ಲಾ ಮಟ್ಟದ ಸ್ಕೌಟ್ಸ್-ಗೈಡ್ಸ್ ರ್‍ಯಾಲಿಯಲ್ಲಿ ಕೆ.ಎಲ್.ಇ. ಮಹಾದೇವಪ್ಪಣ್ಣಾ ಮನವಳ್ಳಿ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಈ ರ್‍ಯಾಲಿಯಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾ, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಗಜಾನ ಮನ್ನಿಕೇರಿ, ಎ.ಎಸ್.ಓ.ಸಿ ಶ್ರೀ ಡಿ.ಬಿ. ಅತ್ತಾರ, ಜಿಲ್ಲಾ



ಸಂಘಟಕರಾದ ಶ್ರೀ ವಿಠ್ಠಲ ಬಾಚಗುಂಡಿ, ಸ್ಕೌಟ್ ಮಾಸ್ಟರ್ ಶ್ರೀ ಪಿ.ವೈ. ಪಾಟೀಲ, ಗೈಡ್ ಕ್ಯಾಪ್ಟನ್ ಶ್ರೀಮತಿ ಸುಜಾತಾ ತೊಡಿಕಟ್ಟಿ, ಕಬ್ ಮಾಸ್ಟರ್ ಶ್ರೀಮತಿ ಚೇತನಾ ಪಾಟೀಲ ಹಾಗು ಫ್ಲಾಕ್ ಲೀಡರ್ ಶ್ರೀಮತಿ ಅಂಬಿಕಾ ಕಮ್ಮಾರ ಹಾಗೂ ಉಪಸ್ಥಿತರಿದ್ದರು.

## ಬೆಂಗಳೂರು ಪೂರ್ವ

ನವೆಂಬರ್ 3 ರಿಂದ 4 ರ ವರೆಗೆ ಆನೇಕಲ್‌ನ ಸರಸ್ವತಿ ವಿದ್ಯಾಮಂದಿರ ಶಾಲೆಯ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್‌ಗಳಿಗೆ ತಮಿಳುನಾಡು ವ್ಯಾಪ್ತಿಯ ದೇವರಬೆಟ್ಟ ಎಂಬಲ್ಲಿ ಎರಡು ದಿನಗಳ ಪರಿಸರ ಅಧ್ಯಯನ ಮತ್ತು ಅರಣ್ಯ ಚಾರಣ ಶಿಬಿರವನ್ನು ಏರ್ಪಡಿಸಲಾಗಿತ್ತು. ಶಾಲಾ ಮುಖ್ಯೋಪಾಧ್ಯಾಯಿನಿ ಶ್ರೀಮತಿ ಭಾಗ್ಯ ಶ್ರೀನಿವಾಸ್, ಸ್ಕೌಟ್ ಮಾಸ್ಟರ್ ಶ್ರೀ ಆರ್. ಮುನಿರಾಜು, ಕಬ್ ಮಾಸ್ಟರ್ ಶ್ರೀ ಲಾರೆನ್ಸ್ ವಿ. ಪ್ರದೀಪ್ ಮೊದಲಾದವರು ಭಾಗವಹಿಸಿದ್ದರು.

* ನವೆಂಬರ್ 5 ರಂದು ಆನೇಕಲ್‌ನ ಸ್ಕೌಟ್ ಕಛೇರಿ ಆವರಣದಲ್ಲಿ ಜಿಲ್ಲಾ ಮಟ್ಟದ ದ್ವಿತೀಯ ಸೋಪಾನ್ ಪರೀಕ್ಷಾ ಶಿಬಿರವನ್ನು ಏರ್ಪಡಿಸಲಾಗಿತ್ತು. ವಿವಿಧ ಶಾಲೆಗಳ 350 ಸ್ಕೌಟ್ಸ್-ಗೈಡ್ಸ್‌ಗಳು ಶಿಬಿರದಲ್ಲಿ ಭಾಗವಹಿಸಿದ್ದರು.

* ನವೆಂಬರ್ 12 ರಿಂದ 18 ರ ವರೆಗೆ ಬೆಂಗಳೂರು ಪೂರ್ವ ಜಿಲ್ಲಾ ಸಂಸ್ಥೆಯ ಆಶ್ರಯದಲ್ಲಿ ಸ್ಕೌಟ್ ಮಾಸ್ಟರ್ ಹಾಗೂ ಗೈಡ್ ಕ್ಯಾಪ್ಟನ್ ಮೂಲ ತರಬೇತಿ ಶಿಬಿರವನ್ನು ಆಯೋಜಿಸಲಾಗಿತ್ತು. ಮೊದಲ ಮೂರು ದಿನಗಳು ಹೆಬ್ಬಗೋಡಿಯ ಸರ್ಕಾರಿ ಮಾದರಿ ಪ್ರಾಥಮಿಕ ಪಾಠ ಶಾಲೆಯ ಸಭಾಂಗಣದಲ್ಲಿ ಮತ್ತು ನಂತರದ ನಾಲ್ಕು ದಿನಗಳ ತರಬೇತಿಯನ್ನು ದೊಡ್ಡಬಳ್ಳಾಪುರದ ಬೆಸೆಂಟ್ ಪಾರ್ಕ್ ನಲ್ಲಿ ಹಮ್ಮಿಕೊಳ್ಳಲಾಗಿತ್ತು. ಶಿಬಿರಕ್ಕೆ ಸಾರ್ವಜನಿಕ ಶಿಕ್ಷಣ ಇಲಾಖೆಯ ಬೆಂಗಳೂರು ದಕ್ಷಿಣ ಜಿಲ್ಲೆಯ



ಉಪನಿರ್ದೇಶಕರಾದ ಶ್ರೀ ರಾಜೇಂದ್ರ, ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಕೆ.ಸಿ. ರಮೇಶ್, ವಿಷಯ ಪರಿವೀಕ್ಷಕರಾದ ಡಾ. ಜಯಪ್ರಕಾಶ್, ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಚಿನ್ನಸ್ವಾಮಿರೆಡ್ಡಿ ಭೇಟಿ ನೀಡಿ ಶಿಬಿರಾರ್ಥಿಗಳನ್ನು ಪ್ರೋತ್ಸಾಹಿಸಿ ಹಿತನುಡಿಗಳನ್ನು ಹೇಳಿದರು.

ಸ್ಕೌಟ್ ಮಾಸ್ಟರ್ ಶಿಬಿರದಲ್ಲಿ 24 ಶಿಕ್ಷಕರು ಮತ್ತು ಗೈಡ್ ಕ್ಯಾಪ್ಟನ್ ತರಬೇತಿಗೆ 21 ಶಿಕ್ಷಕಿಯರು ಭಾಗವಹಿಸಿದ್ದರು. ಸ್ಕೌಟ್ ವಿಭಾಗದ ನಾಯಕರಾಗಿ ಹೊಸಕೋಟೆ ತಾಲ್ಲೂಕಿನ ಶ್ರೀ ಜವರಯ್ಯ ಎ.ಎಲ್.ಟಿ. (ಸ್ಕೌಟ್) ಗೈಡ್ ವಿಭಾಗಕ್ಕೆ ನಾಯಕಿಯಾಗಿ ಶ್ರೀಮತಿ ಎನ್.ಕೆ. ಛಾಯಾ, ಎಲ್.ಟಿ. (ಗೈ) ಅವರುಗಳು ಕಾರ್ಯನಿರ್ವಹಿಸಿದರು.

* ಜಿಗಣಿ ಸ್ಥಳೀಯ ಸಂಸ್ಥೆಯು ನಿತ್ಯಾನಂದಸ್ವಾಮಿ ಪ್ರೌಢಶಾಲಾ ಆವರಣದಲ್ಲಿ ಏರ್ಪಡಿಸಿದ ರ್‍ಯಾಲಿಯಲ್ಲಿ ಬೆಂಗಳೂರು ಪೂರ್ವ ಜಿಲ್ಲಾ ಸಂಸ್ಥೆ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರಕುಮಾರ್ ಮಾತನಾಡಿ ಸ್ಕೌಟ್ಸ್-ಗೈಡ್ಸ್‌ಗಳಿಂದ ಮಕ್ಕಳಲ್ಲಿ ಸೌಹಾರ್ದ ಮನೋಭಾವ ಬೆಳಯುತ್ತಿದೆ ಎಂದು ತಿಳಿಸಿದರು.

ನಿತ್ಯಾನಂದ ಶಿಕ್ಷಣ ಸಂಸ್ಥೆಯ ಸಹ ಕಾರ್ಯದರ್ಶಿ ಶ್ರೀ ಜೆ.ಪಿ. ಶಿವರಾಮರೆಡ್ಡಿ ಮಾತನಾಡಿ ಮಕ್ಕಳಲ್ಲಿ ಸೇವಾ ಮನೋಭಾವ ಬೆಳೆಯಬೇಕು. ಬಾಲ್ಯದಿಂದಲೇ ಅವರಿಗೆ ಸಮಾಜಮುಖಿ ಕಾರ್ಯಗಳಲ್ಲಿ ತೊಡಗಿಸಿ ಅವರನ್ನು ನಾಡಿನ ಹಾಗೂ ರಾಷ್ಟ್ರದ ಉತ್ತಮ ಪ್ರಜೆಗಳನ್ನಾಗಿಸುವುದು ಶಿಕ್ಷಣ ಸಂಸ್ಥೆಗಳ ಗುರಿಯಾಗಬೇಕು ಎಂದು ನುಡಿದರು.



ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಕೆ.ಟಿ. ಸ್ವಾಮಿ ಕಾರ್ಯಕ್ರಮದ ನೇತೃತ್ವ ವಹಿಸಿದ್ದರು. ಮಕ್ಕಳಿಗೆ ರಂಗೋಲಿ, ಸ್ಥಳದಲ್ಲೇ ಚಿತ್ರ ಬಿಡಿಸುವುದು, ಕ್ಲೇ ಮಾಡಲಿಂಗ್, ವಸ್ತುಪ್ರದರ್ಶನ, ರಸಪ್ರಶ್ನೆ, ಗುಡಾರ ನಿರ್ಮಾಣ, ವೆಜಿಟಲಬ್ ಕಾರ್ವಿಂಗ್ ಇನ್ನೂ ಮೊದಲಾದ ಸ್ಪರ್ಧೆಗಳನ್ನು ಆಯೋಜಿಸಿ ವಿಜೇತರಿಗೆ ಬಹುಮಾನಗಳನ್ನು ನೀಡಲಾಯಿತು.

ಮುಖ್ಯೋಪಾಧ್ಯಾಯ ಶ್ರೀ ವಿ.ಎಸ್. ರಮೇಶ್, ಪದವಿಪೂರ್ವ ಕಾಲೇಜಿನ ಪ್ರಾಂಶುಪಾಲ ಶ್ರೀ ಹೆಚ್.ಎನ್. ವೆಂಕಟೇಶ್, ಪ್ರಥಮದರ್ಜೆ ಕಾಲೇಜಿನ ಪ್ರಾಂಶುಪಾಲ ಶ್ರೀ ಹರೀಶ್ ನಾಯಕ್, ಮುಖ್ಯಾಪಾಧ್ಯಾಯ ಶ್ರೀ ಶಿವಶಂಕರ್ ರೆಡ್ಡಿ, ಜಿಗಣಿ ಸ್ಥಳೀಯ ಸಂಸ್ಥೆಯ ಅಧ್ಯಕ್ಷ ಶ್ರೀ ಬಿ. ಜಗದೀಶ್ ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

## Bengaluru South

The Souts-Guides of Walchand Hirachand Open Air Group undertook a Cycle Hike on Sunday the 16th December 2018 from Marathahalli to HAL Scout Den (TTI), Bro.D. Shivappa, Bro. Mallikarjuna and Bro. B.G. Umesh coordinated the Cycle Rally. The Scouts-Guides were given the task of Cooking by Backwodman Cooking after reaching the destination. Smt. Bharathi Chakravathi, Secretary, Whitefield Local Association welcomed the gathering. Sri Chakravathi flagged off the Rally.

* A new Scout Troop was Inaugurated at BGMS Shishunja Vidyalaya, Rameshnagar, Marathahalli by Sri P. Nandakumar, RSL, HAL Rover Crew by Lighting the Lamp. Smt. Prasanna, Board Member, Mrs. Shrimathi, Principal Smt. Prema. Vice Principal, Sri Venkatesh, Admin Manager, Bro.



Mallikarjuna, Bro. D Shivappa were present. Scouts Sripad, Sri Bhim Shankar, Scout Master, Co-ordinated the Programme.

* Bengaluru South District Conducted the Karnataka Darshan programme from 30th November to 7th December in which 400 Scouts-Guides along with 48 Unit Leaders participated.

All the participants were divided into three Batches

1) Batch 30th Nov. to 5th Dec (3 Buses)

2) Batch 1st Dec. to 6th Dec. (3 Buses)

3) Batch 2nd Dec. to 7th Dec. (2 Buses)

## Bengaluru North

The Shivajinagar Local Association organised "Badge-Work Camp" for Cubs-Bulbuls, and Souts-Guides at Dr. Annie Besant Scout - Guide State Training Centre, Doddaballapur on 1st & 2nd, December 2018, 24 Cubs-Bulbuls, 120 Scouts & Guides & 12 Staff & Unit Leaders participated in the Camp. Smt. B. Revathy, L.T.(B), Sri P. Nandakumar, HWB (R), Smt. Krupa Vijai, ALT(G) were Leaders in the Camp. The Programme was Co-ordinated Smt. Krupa Vijai, ALT (G), Secretary, Shivajinagar Local Association.



## ಚಾಮರಾಜನಗರ

ಅಕ್ಟೋಬರ್ 30 ರಂದು ಶ್ರೀ ವಲ್ಲಭಬಾಯಿ ಪಟೇಲ್ ರವರ ಜನ್ಮದಿನವನ್ನು "ಏಕತಾದಿನಾಚರಣೆಯಾಗಿ" ಆಚರಿಸಲಾಯಿತು. ಸೆಂಟ್ ಜೋಸೆಫ್ ಶಾಲಾ ಸ್ಕೌಟ್ಸ್-ಗೈಡ್ಸ್ ಹಾಗೂ ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಬೇಗೂರು, ಗುಂಡ್ಲುಪೇಟೆ ತಾಲೂಕಿನ ಸ್ಕೌಟ್ಸ್-ಗೈಡ್ಸ್‌ಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

* ನವೆಂಬರ್ 10 ರಂದು ಸರಕಾರಿ ಹಿರಿಯ ಪ್ರಾಥಮಿಕ ಶಾಲೆ, ಉಪ್ಪಾರಬೀದಿಯಲ್ಲಿ ಭಾರತ್ ಸ್ಕೌಟ್ ಮತ್ತು ಗೈಡ್ಸ್‌ನ ಸಂಸ್ಥಾಪನಾ ದಿನಾಚರಣೆಯನ್ನು ಆಚರಿಸಲಾಯಿತು. ಶ್ರೀ ಷರಾಫ್ ಮಾದಪ್ಪ ಜಿಲ್ಲಾ ಸ್ಕೌಟ್ ಆಯುಕ್ತರು, ಶ್ರೀ ವಿ.ಎಂ. ರಾಮಚಂದ್ರ, ಜಿಲ್ಲಾ ಕಾರ್ಯದರ್ಶಿ, ಕು॥ ಪಿ. ಕಮಲಮ್ಮ ಡಿ.ಓ.ಸಿ(ಜಿ) ಶ್ರೀ ಕೆ.ಪಿ. ಅಶೋಕ್ ಕುಮಾರ್ ಡಿ.ಓ.(ಎಸ್) ಹಾಗೂ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು.

* ನವೆಂಬರ್ 19 ರಂದು ಆಯಾ ಶಾಲಾ ಘಟಕದ ವತಿಯಿಂದ "ವಿಶ್ವ ಶೌಚಾಲಯ ದಿನಾಚರಣೆ"ಯನ್ನು ಆಚರಿಸಲಾಯಿತು.

* ನವೆಂಬರ್ 6 ರಿಂದ 9 ರ ವರೆಗೆ ಶ್ರೀ ಮಲೈ ಮಹದೇಶ್ವರ ಬೆಟ್ಟ ಮತ್ತು ಕೊಳ್ಳೇಗಾಲದಲ್ಲಿ ಪ್ರಯಾಣಿಕರ ಸುವ್ಯವಸ್ಥೆ ಹಾಗೂ ದಾಸೋಹ, ಮಠದಲ್ಲಿ ಪ್ರಸಾದ ಹಂಚುವಿಕೆ ಹಾಗೂ ಶ್ರೀ ಮಹದೇಶ್ವರ ದೇವಸ್ಥಾನದ ಒಳಗೆ ಭಕ್ತರನ್ನು ದೇವರ ದರ್ಶನಕ್ಕೆ ಸಾಲಾಗಿ ಕಳುಹಿಸುವುದು ಇನ್ನಿತರ ಸೇವಾ ಕಾರ್ಯಕ್ರಮದಲ್ಲಿ ಜಿಲ್ಲೆಯ 20 ರೋವರ್ಸ್‌ಗಳು ಶ್ರೀ ಪ್ರದೀಪ್ ಆರ್.ಎಲ್.ಎನ್. ಮತ್ತು ಶ್ರೀ ಕೆ.ಪಿ. ಅಶೋಕ್ ಕುಮಾರ್ ಡಿ.ಓ., ರವರ ನೇತೃತ್ವದಲ್ಲಿ ಭಾಗವಹಿಸಿದ್ದರು.

* ನವೆಂಬರ್ 16 ರಂದು ಹನೂರಿನಲ್ಲಿ ಜರುಗಿದ ಅಂಗವಿಕಲರ ಆರೋಗ್ಯ ತಪಾಸಣಾ ಶಿಬಿರದಲ್ಲಿ

ಜೆ.ಎಸ್.ಎಸ್. ಪ್ರೌಢಶಾಲೆಯ ಗೈಡ್ಸ್, ವಿವೇಕಾನಂದ ಶಾಲೆಯ ಸ್ಕೌಟ್ಸ್ ಒಟ್ಟು 20 ಮಕ್ಕಳು ಭಾಗವಹಿಸಿ ಸೇವೆಸಲ್ಲಿಸಿದರು.

* ನವೆಂಬರ್ 17 ರಂದು ಜಿ.ಎಚ್.ಎಸ್. ಕುರಹಟ್ಟಿ, ಹನೂರು ಸ್ಕೌಟ್ಸ್‌ಗಳಿಗೆ ಚಿತ್ರಕಲಾ ಪ್ರದರ್ಶನ ಏರ್ಪಡಿಸಲಾಗಿತ್ತು.

## ದಾವಣಗೆರೆ

* ನವೆಂಬರ್ 7 ರಂದು ಸಂಸ್ಥಾಪಕರ ದಿನಾಚರಣೆ ಅಂಗವಾಗಿ, ಧ್ವಜಚೀಟಿ ಬಿಡುಗಡೆ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ದಾವಣಗೆರೆ ದಕ್ಷಿಣ ವಿಧಾನಸಭಾ ಕ್ಷೇತ್ರದ ಶಾಸಕರಾದ ಶ್ರೀ ಶಾಮನೂರು ಶಿವಶಂಕರಪ್ಪನವರ ಗೃಹದಲ್ಲಿ ಧ್ವಜಚೀಟಿಗಳನ್ನು ಬಿಡುಗಡೆಗೊಳಿಸಿದರು ಹಾಗೂ ದಾವಣಗೆರೆ ಜಿಲ್ಲಾಧಿಕಾರಿಗಳಾದ ಶ್ರೀ ಬುಗಾದಿ ಗೌತಮ್, ಭಾ.ಆ.ಸೇ ಇವರು ತಮ್ಮ ಕಛೇರಿಯಲ್ಲಿ ಧ್ವಜಚೀಟಿಗಳನ್ನು ಬಿಡುಗಡೆ ಮಾಡಿದರು. ಈ ಸಂದರ್ಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ, ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಎ.ಪಿ. ಷಡಾಕ್ಷರಪ್ಪ, ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಪುಟ್ಟಮ್ಮ ಮಹಾರುದ್ರಯ್ಯ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್. ಶಂಕರ್‌ನಾಯ್ಕ್, ಜಿಲ್ಲಾ ಸ್ಥಾನಿಕ ಆಯುಕ್ತರಾದ ಶ್ರೀ ಎ. ಶಿವಪ್ಪ, ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ಟಿ.ಎಸ್. ಶಿವಣ್ಣ ಹಾಗೂ ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀಮತಿ ಆರ್. ಸುಖವಾಣಿ ಉಪಸ್ಥಿತರಿದ್ದರು. ಆರ್.ವಿ.ಜೆ.ಕೆ. ಮತ್ತು ಸೆಂಟ್ ಪಾಲ್ಸ್ ಕಾನ್ವೆಂಟ್ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಸಮಾರಂಭದಲ್ಲಿ ಭಾಗವಹಿಸಿದ್ದರು. ಸ್ಕೌಟ್ ಮಾಸ್ಟರ್‌ಗಳಾದ ಶ್ರೀ ಸುರೇಶ್ ಮತ್ತು ಶ್ರೀ ಟಿ.ಎಂ. ರವೀಂದ್ರಸ್ವಾಮಿ ಭಾಗವಹಿಸಿದ್ದರು.



## ಹಾಸನ

ಮಾನವೀಯ ಮೌಲ್ಯಗಳನ್ನು ಬೆಳೆಸಲು ಹಾಗೂ ಸಮುದಾಯ ಸೇವೆಯನ್ನು ಚಿಕ್ಕವಯಸ್ಸಿನಲ್ಲಿ ಕಲಿಸುವ ನಿಟ್ಟಿನಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕಾರ್ಯ ಶ್ಲಾಘನೀಯವಾಗಿ ಕಾರ್ಯನಿರ್ವಹಿಸುತ್ತಿದೆ ಎಂದು ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ ಡಾ॥ ಎ.ಎನ್. ಪ್ರಕಾಶ್ ಗೌಡ ತಿಳಿಸಿದರು. ನವೆಂಬರ್ 7 ರಂದು ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳ ಕಛೇರಿಯಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ವತಿಯಿಂದ ಹಮ್ಮಿಕೊಂಡಿದ್ದ ಧ್ವಜ ದಿನಾಚರಣೆಯಲ್ಲಿ ಮಾತನಾಡಿದರು. ಹೆಚ್ಚುವರಿ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ ಶ್ರೀಮತಿ ನಂದಿನಿ ಮಾತನಾಡಿ ಹಾಸನಾಂಬ ಜಾತ್ರಾಮಹೋತ್ಸವದಲ್ಲಿ ಭಕ್ತಾಧಿಗಳಿಗೆ ಸೇವೆ ಸಲ್ಲಿಸುವ ಕುರಿತು ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳಿಗೆ ಮೆಚ್ಚುಗೆ ವ್ಯಕ್ತಪಡಿಸಿದರು. ಜಿಲ್ಲಾ ಮುಖ್ಯ ಆಯುಕ್ತ ಡಾ॥ ವೈ.ಎಸ್. ವೀರಭದ್ರಪ್ಪ ಮಾತನಾಡಿ ಮಕ್ಕಳ ಸರ್ವಾಂಗೀಣ ಬೆಳವಣಿಗೆಗೆ ಸ್ಕೌಟ್ಸ್-ಗೈಡ್ಸ್‌ನ ಶಿಕ್ಷಣ ಬಹಳಷ್ಟು ಪರಿಣಾಮಕಾರಿಯಾಗಿದ್ದು, ಚಿಕ್ಕ ವಯಸ್ಸಿನಲ್ಲೇ ಜೀವನ ಕೌಶಲ್ಯದ ಶಿಕ್ಷಣ ದೊರಕುತ್ತಿರುವುದರಿಂದ ಮಕ್ಕಳಲ್ಲಿ ಸೇವಾ ಭಾವನೆಯು ಜೊತೆ ದೇಶದ ಸತ್ಪ್ರಜೆಗಳಾಗಿ ರೂಪುಗೊಳ್ಳುತ್ತಿದ್ದಾರೆ ಎಂದರು. ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಪ್ರಕಾಶ್ ಎಸ್. ಯಾಜಿ ಸ್ವಾಗತಿಸಿ, ಉಪಾಧ್ಯಕ್ಷ ಶ್ರೀ ಸುರೇಶ್ ಗುರೂಜಿ ವಂದಿಸಿದರು. ಜಿಲ್ಲಾ ಸಂಘಟಕಿ ಕು॥ ಹೆಚ್.ಎಂ. ಪ್ರಿಯಾಂಕ ಧ್ವಜ ದಿನಾಚರಣೆಯ ಮಹತ್ವ ಕುರಿತು ಮಾತನಾಡಿದರು. ಈ ಕಾರ್ಯಕ್ರಮದಲ್ಲಿ ಸ್ಕೌಟ್ಸ್-ಗೈಡ್ಸ್ ಮತ್ತು ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು.

* ನವೆಂಬರ್ 7 ರಂದು ಚನ್ನರಾಯಪಟ್ಟಣ ತಾಲ್ಲೂಕಿನ ನಾಗಶ್ರೀ ಶಾಲೆಯಲ್ಲಿ ಧ್ವಜ ದಿನಾಚರಣೆ ಕಾರ್ಯಕ್ರಮವನ್ನು ಆಚರಿಸಲಾಯಿತು ಈ ಕಾರ್ಯಕ್ರಮವನ್ನು ಪ್ರಾಂಶುಪಾಲರಾದ ಶ್ರೀಮತಿ ನಾಜೀರಾ ಬಾನುರವರು ಗಿಡಕ್ಕೆ ನೀರು ಎರೆಯುವುದರ ಮೂಲಕ ಉದ್ಘಾಟಿಸಿದರು. ನಂತರ ಸ್ಕೌಟ್ ಮಾಸ್ಟರ್ ಶ್ರೀ ತಾಂಡವಮೂರ್ತಿರವರು ಎಲ್ಲರನ್ನು ಸ್ವಾಗತಿಸಿದರು. ಶ್ರೀಮತಿ ನಾಜೀರ ಬಾನುರವರು ಮಾತನಾಡಿ ಮಕ್ಕಳಲ್ಲಿ ನಿಸ್ವಾರ್ಥ ಸೇವೆ ಸಲ್ಲಿಸಲು ಮತ್ತು ಸ್ವಯಂ ಸೇವಕರಾಗಿ ಕಾರ್ಯನಿರ್ವಹಿಸಲು ಮತ್ತು ಸ್ವಾವಲಂಬಿಯಾಗಿ ಬದುಕಲು ಸ್ಕೌಟ್ಸ್-ಗೈಡ್ಸ್ ಚಳುವಳಿ ಅವಶ್ಯಕವಾಗಿದೆ.



ಹಾಗೂ ಸಮಾಜದ ನೈತಿಕ ಬೆಳವಣಿಗೆಗೆ ಸ್ಕೌಟಿಂಗ್ ತರಬೇತಿ ಮುಖ್ಯ ಎಂದು ಅಭಿಪ್ರಾಯಪಟ್ಟರು. ನಂತರ ಸ್ಕೌಟ್ ಮಾಸ್ಟರ್ ಶ್ರೀ ತಾಂಡವಮೂರ್ತಿರವರು ಧ್ವಜ ದಿನಾಚರಣೆಯ ಮಹತ್ವವನ್ನು ತಿಳಿಸಿದರು. ಈ ಸಂದರ್ಭದಲ್ಲಿ ರೋವರ್ ಲೀಡರ್ ಶ್ರೀ ಶಂಕರೇಶ್, ಗೈಡ್ ಕ್ಯಾಪ್ಟನ್ಸ್, ಕಬ್ ಮಾಸ್ಟರ್ಸ್ ಹಾಗೂ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿದ್ದರು.

* ನವೆಂಬರ್ 3 ರಂದು ಕಬ್ಸ್ ಮತ್ತು ಬುಲ್‌ಬುಲ್‌ಗಳಿಗೆ ಚತುರ್ಥ ಚರಣ್ ಹಾಗೂ ಹೀರಕ್ ಪಂಖ್ ಪರೀಕ್ಷಾ ಶಿಬಿರವನ್ನು ಜಿಲ್ಲಾ ಸಂಸ್ಥೆಯಲ್ಲಿ ಆಯೋಜಿಸಲಾಗಿತ್ತು. ಈ ಕಾರ್ಯಕ್ರಮದಲ್ಲಿ ಒಟ್ಟು 48 ಕಬ್ಸ್, 37 ಬುಲ್‌ಬುಲ್ಸ್ ಭಾಗವಹಿಸಿದ್ದರು. ಸದರಿ ಶಿಬಿರದ ನಾಯಕಿಯಾಗಿ ಸೌಫಿಯಾ ಫರ್ನಾಂಡೀಸ್ ಹಾಗೂ ನಾಯಕರಾಗಿ ಶ್ರೀ ಕೆ.ಪಿ. ಸ್ವಾಮಿ ರವರು ಭಾಗವಹಿಸಿದ್ದರು.

ಸಂಜೆ ನಡೆದ ಸಮಾರೋಪ ಸಮಾರಂಭದ ಅಧ್ಯಕ್ಷತೆ ವಹಿಸಿದ ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ವೈ.ಎಸ್. ವೀರಭದ್ರಪ್ಪನವರು ಮಾತನಾಡುತ್ತ ಚಿಕ್ಕ ವಯಸ್ಸಿನಿಂದಲೇ ಮಕ್ಕಳಿಗೆ ದೇಶಪ್ರೇಮ, ಧೈರ್ಯ, ಮಾನವೀಯ ಮೌಲ್ಯಗಳು, ಸೇವೆಯ ಮನೋಭಾವನೆ ಬೆಳೆಯಬೇಕು ಎಂದು ಅಭಿಪ್ರಾಯಪಟ್ಟರು. ಹಾಗೆಯೇ ಒಂದು ಸಣ್ಣ ಅಳಿಲು ಸೇವೆಯ ಕಥೆಯನ್ನು ತಿಳಿಸಿ, ನಮ್ಮ ಕೈಲಾದ ಮಟ್ಟಿಗೆ ಬೇರೆಯವರಿಗೆ ಸದಾ ಸಹಾಯ ಮಾಡಬೇಕು ಎಂದು ಸೂಚಿಸಿದರು. ಕಾರ್ಯಕ್ರಮದ ಅತಿಥಿಯಾಗಿ ಭಾಗವಹಿಸಿದ ಜಿಲ್ಲಾ ಉಪಾಧ್ಯಕ್ಷರಾದ ಶ್ರೀ ಸುರೇಶ್ ಗುರೂಜಿರವರು ಕಬ್ಸ್-ಬುಲ್ಸ್‌ಗಳಿಗೆ ಕಥೆಯ ಮೂಲಕ ಕುರಿಯಂತೆ ತಲೆ ತಗ್ಗಿಸಿ ಬಾಳುವುದಕ್ಕಿಂತ ಹುಲಿಯಂತೆ ತಲೆ ಎತ್ತಿ ಧೈರ್ಯವಾಗಿ ಬಾಳಿ ಎಂದು ಸಂದೇಶವನ್ನು ತಿಳಿಸಿದರು. ಜಿಲ್ಲಾ ಸಂಘಟಕಿ ಕು॥ ಹೆಚ್. ಎಂ. ಪ್ರಿಯಾಂಕ ಕಾರ್ಯಕ್ರಮವನ್ನು ನಿರೂಪಿಸಿದರು. ಕಬ್ ಮಾಸ್ಟರ್ ಶ್ರೀ ಡಿ.ವಿ. ದೇವರಾಜು ವಂದಿಸಿದರು.



## ಕಾರವಾರ

ಕಾರವಾರ ಜಿಲ್ಲಾ ಸಂಸ್ಥೆ ಹೊನ್ನಾವರ ತಾಲೂಕಿನಲ್ಲಿ ಸಂಸ್ಥಾಪನಾ ದಿನಾಚರಣೆಯ ಧ್ವಜ ಚೀಟಿ ಬಿಡುಗಡೆ ಹಾಗೂ ಸ್ವಚ್ಛತಾ ಅಭಿಯಾನ ಕಾರ್ಯಕ್ರಮವನ್ನು ನಗರದ ನ್ಯಾಯಾಲಯದ ಆವರಣದಲ್ಲಿ ಮುಖ್ಯ ನ್ಯಾಯಾಧೀಶರಾದ ಶ್ರೀ ಕೆ.ಎಂ. ಚೆನ್ನಕೇಶವ ರೆಡ್ಡಿ ಉದ್ಘಾಟಿಸಿ, ಧ್ವಜ ಚೀಟಿಗಳನ್ನು ಬಿಡುಗಡೆಗೊಳಿಸಿದರು. ಪ್ರತಿಯೊಬ್ಬ ವಿದ್ಯಾರ್ಥಿಯು ಕಡ್ಡಾಯವಾಗಿ ಸ್ಕೌಟ್-ಗೈಡ್‌ನ್ನು ಸೇರಬೇಕು, ಸ್ಕೌಟ್-ಗೈಡ್‌ನಲ್ಲಿರುವ ನಿಯಮಗಳನ್ನು ಅನುಸರಿಸಿಕೊಂಡು ಅಳವಡಿಸಿಕೊಂಡಲ್ಲಿ ದೇಶದ ಪ್ರಗತಿಗೆ ಮತ್ತು ವೈಯಕ್ತಿಕ ಜೀವನಕ್ಕೆ ಅವಶ್ಯಕ ಎಂದು ತಿಳಿಸಿದರು. ಶ್ರೀ ಬದರಿನಾಥ ನಾಯರ್ ಎ.ಪಿ.ಪಿ., ಶ್ರೀ ಜಿ.ಜಿ. ಸಭಾಹಿತ್, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಆರ್.ಟಿ. ಹೆಬ್ಬಾರ್, ಜಿಲ್ಲಾ ಖಜಾಂಚಿ, ಶ್ರೀ ಬಿ.ಡಿ. ಫರ್ನಾಂಡೀಸ್ ಜಿಲ್ಲಾ ಕಾರ್ಯದರ್ಶಿ, ಶ್ರೀ ಕರಿಸಿದ್ದಪ್ಪ ಎ.ಎಸ್.ಓ.ಸಿ. ಶ್ರೀ ಬಿ.ಎಮ್. ಭಟ್ಟ ಡಿ.ಟಿ.ಸಿ, ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳು, ಸ್ಕೌಟರ್-ಗೈಡರ್ಸ್‌ಗಳು ಸ್ಕೌಟ್-ಗೈಡ್ಸ್‌ಗಳು ಸಮಾರಂಭದಲ್ಲಿ ಭಾಗವಹಿಸಿದ್ದರು.



## ಕೊಪ್ಪಳ

ನವೆಂಬರ್ 17 ರಂದು ಬಾಲಕರ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಹನುಮಸಾಗರ ಕುಷ್ಟಗಿ ತಾಲ್ಲೂಕಿನಲ್ಲಿ "ಡಾ. ಎ.ಪಿ.ಜೆ. ಅಬ್ದುಲ್ ಕಲಾಂ" ಸ್ಕೌಟ್ಸ್ ಘಟಕವನ್ನು ಪ್ರಾರಂಭಿಸಲಾಯಿತು. ಶ್ರೀ ಸುಭಾಸ್ ಚಂದ್ರ ವಡ್ಡರ ಎಸ್.ಡಿ.ಎಂ.ಸಿ. ಅಧ್ಯಕ್ಷರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಮಹಾಂತೇಶ ಚೌಡಾಪೂರ, ಶಿಕ್ಷಣ ಸಂಯೋಜಕರು, ಹನುಮಸಾಗರ ವಲಯ ಇವರು ಘಟಕವನ್ನು ಉದ್ಘಾಟಿಸಿದರು. ಅತಿಥಿಗಳಾಗಿ ಎಸ್.ಡಿ.ಎಂ.ಸಿ. ಉಪಾಧ್ಯಕ್ಷರಾದ ಶ್ರೀಮತಿ ಸೋನಾಬಿ, ಶ್ರೀಮತಿ ಶೋಭಾ ಹಾಜರಿದ್ದರು. ಪ್ರಾಸ್ತಾವಿಕವಾಗಿ ಮಾತನಾಡಿದ ಶ್ರೀನಂದಲಾಲ ದಲಬಂಜನ ಮಕ್ಕಳಲ್ಲಿ ಶಿಸ್ತು, ಸೇವಾ ಮನೋಭಾವ ಹಾಗೂ ದೇಶಭಕ್ತಿ ಬೆಳೆಸಲು ಇದು ಸಹಕಾರಿಯಾಗಿದೆ ಎಂದು ತಿಳಿಸಿದರು. ಉದ್ಘಾಟಕರಾದ ಶ್ರೀ ಮಹಾಂತೇಶ ಚೌಡಾಪೂರ ಮಾತನಾಡಿ ಮಕ್ಕಳಲ್ಲಿ ಸಮಯ ಪ್ರಜ್ಞೆ, ಭಾವೈಕ್ಯತೆ ಮನೋಭಾವ, ಸಮರ್ಪಣಾ ಭಾವ ಬೆಳೆಸುವಲ್ಲಿ ಚಳವಳಿ ಸಹಕಾರಿಯಾಗಿದೆ ಹಾಗೂ ಇಲಾಖೆಯ ನಿರ್ದೇಶನದಂತೆ ಎಲ್ಲಾ ಶಾಲೆಗಳಲ್ಲಿ ಇದು ಕಡ್ಡಾಯವಾಗಿ ಸ್ಥಾಪಿಸಬೇಕು ಎಂದು ತಿಳಿಸಿದರು. ಸ್ಕೌಟ್ ಮಾಸ್ಟರ್ ಶ್ರೀ ಮಹಬೂಬ ಕಂದಗಲ್ಲ ಮಾತನಾಡಿ ಮಕ್ಕಳಲ್ಲಿ ಸಮಯ ಪ್ರಜ್ಞೆ, ವಿನಯಶೀಲತೆ ಸೇವಾ ಮನೋಭಾವದ ಜೊತೆಗೆ ಜೀವನ ಕೌಶಲ್ಯಗಳನ್ನು ಸ್ಕೌಟ್ಸ್-ಗೈಡ್ಸ್ ನಿಂದ ಪಡೆಯಬಹುದಾಗಿದೆ ಎಂದರು. ಅಧ್ಯಕ್ಷರು ಮಾತನಾಡಿ ಇದೊಂದು ಉತ್ತಮವಾದ ಸ್ವಯಂ ಸೇವಾ ಮನೋಭಾವ ಬೆಳೆಸುವ ಹಾಗೂ ಶಿಸ್ತನ್ನು ಕಲಿಸುವ ಪಾಠಶಾಲೆಯಾಗಿದೆ ಎಂದರು. ಶ್ರೀ ಆನಂದ ಕೊಪ್ಪದ ಶಿಕ್ಷಕರು ನಿರೂಪಿಸಿದರು. ಶ್ರೀ ಹೂವಪ್ಪ, ಶಿಕ್ಷಕರು ಸ್ವಾಗತಿಸಿದರು. ಶ್ರೀಮತಿ ಉಮಾ ನಾಗೂರ ವಂದಿಸಿದರು.

* ಡಿಸೆಂಬರ್ 8 ರಿಂದ 10 ರ ವರೆಗೆ ಯಲಬುರ್ಗಾ ತಾಲ್ಲೂಕು ಮಟ್ಟದ ದ್ವಿತೀಯ ಸೋಪಾನ್ ಪರೀಕ್ಷಾ ಶಿಬಿರ ಮತ್ತು ಪೆಟ್ರೋಲ್ ಲೀಡರ್ ಶಿಬಿರವನ್ನು ಸ.ಹಿ.ಪ್ರಾ.ಶಾಲೆ, ಕುದರಿಮೋತಿಯಲ್ಲಿ ಹಮ್ಮಿಕೊಳ್ಳಲಾಗಿತ್ತು

ಶಿಬಿರದ ಉದ್ಘಾಟನೆ ಕಾರ್ಯಕ್ರಮದಲ್ಲಿ ಶ್ರೀ ಶ್ರೀಕಾಂತ ಮಾಸಗಟ್ಟಿ, ಜಿಲ್ಲಾ ತರಬೇತಿ ಆಯುಕ್ತರು ಮಾತನಾಡಿ ಸ್ಕೌಟ್ಸ್-ಗೈಡ್ಸ್ ಶಿಕ್ಷಣವನ್ನು ಪ್ರತಿಯೊಂದು ಮಗುವಿಗೂ ನೀಡುವುದು ಅವಶ್ಯವಾಗಿದೆ, ಸ್ಕೌಟ್ಸ್-ಗೈಡ್ಸ್ ಶಿಕ್ಷಣ ಗ್ರಾಮಾಂತರ ಮಕ್ಕಳಿಗೆ ದೊರೆಯಬೇಕು ಎಂದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾರವರು ದೂರವಾಣಿ ಮೂಲಕ ಮಾತನಾಡಿ, ಕುದರಿಮೋತಿಯಲ್ಲಿ ಹಮ್ಮಿಕೊಂಡಿರುವ ಕಾರ್ಯಕ್ರಮದ ಕುರಿತು ಹರ್ಷವನ್ನು ವ್ಯಕ್ತಪಡಿಸುತ್ತಾ ಪ್ರೇರಣೆಯ ಮಾತುಗಳನ್ನಾಡಿದರು ಹಾಗೂ ಗ್ರಾಮಪಂಚಾಯತ್ ಅಧ್ಯಕ್ಷರಿಗೆ ಮತ್ತು ಶಾಲಾ ಮುಖ್ಯೋಪಾಧ್ಯಾಯರಿಗೆ ಅಭಿನಂದನೆಗಳನ್ನು ಸಲ್ಲಿಸಿದರು. ಶ್ರೀ ಬಸವರಾಜ ಗಟ್ಟೆಪ್ಪನವರ, ಅಧ್ಯಕ್ಷರು, ಗ್ರಾಮಪಂಚಾತ್, ಕುದರಿಮೋತಿ ಇವರು ಜ್ಯೋತಿ ಬೆಳಗಿಸುವದರ ಮೂಲಕ ಶಿಬಿರಕ್ಕೆ ಚಾಲನೆ ನೀಡಿ ಮಾತನಾಡುತ್ತಾ ನಮ್ಮ ಗ್ರಾಮದಲ್ಲಿ ಈ ಕಾರ್ಯಕ್ರಮವನ್ನು ಹಮ್ಮಿಕೊಂಡಿರುವದು ಸಂತೋಷವಾಗಿದೆ ಎಂದರು. ಕಾರ್ಯಕ್ರಮದಲ್ಲಿ ಶ್ರೀಮತಿ ಅರುಣಾ ವಸ್ತ್ರದ, ಜಿಲ್ಲಾ ಆಯುಕ್ತೆ(ಗೈ) ಶ್ರೀ ಅಬ್ದುಲ್ ಗಫರ ಬಳಿಗಾರ, ಪಿ.ಡಿ.ಓ., ಶ್ರೀ ಹನಮಂಗೌಡ ಪೋಲೀಸಪಾಟೀಲ್ ದಳಪತಿ, ಶ್ರೀ ಕಳಕೇಶ ಬಳಿಗಾರ, ಮುಖ್ಯ ಶಿಕ್ಷಕ, ಕುದರಿಮೋತಿ ಶ್ರೀಮಲ್ಲಪ್ಪ ಗುಡದಣ್ಣವರ ಕೊಪ್ಪಳ ತಾಲೂಕ ಕಾರ್ಯದರ್ಶಿ ಹಾಗೂ ಯಲಬುರ್ಗಾ ಸ್ಥಳೀಯ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.







ಶಾಲೆಯ ಭಗತ್‌ಸಿಂಗ್ ಸ್ಕೌಟ್ ಘಟಕದ ಉದ್ಘಾಟನೆಯನ್ನು ಶಾಲಾ ಎಸ್.ಡಿ.ಎಂ.ಸಿ. ಅಧ್ಯಕ್ಷರಾದ ಶ್ರೀ ದ್ಯಾಮಣ್ಣ ಈಳಗೇರ ನೆರವೇರಿಸಿದರು. ಯಲಬುರ್ಗಾ ತಾಲ್ಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಶರಣಪ್ಪ ವಟಗಲ ಇವರು ಶಿಬಿರಕ್ಕೆ ಭೇಟಿ ನೀಡಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ಹಿತವಚನವನ್ನು ನೀಡಿದರು.

ಶಿಬಿರಕ್ಕೆ 110 ಸ್ಕೌಟ್ಸ್, 45 ಗೈಡ್ಸ್‌ಗಳು ಹಾಗೂ ಪೆಟ್ರೋಲ್ ಲೀಡರ್ ಕ್ಯಾಂಪ್‌ಗೆ 102 ಸ್ಕೌಟ್ಸ್‌ಗಳು ಭಾಗವಹಿಸಿದ್ದರು. ಶ್ರೀ ಪ್ರಭಾಕರ ದಾಸರ, ಸ್ಕೌಟ್ ಪರೀಕ್ಷಾ ಶಿಬಿರದ ನಾಯಕರಾಗಿ, ಶ್ರೀಮತಿ ಮಂಜುಳಾ, ಗೈಡ್ ಶಿಬಿರದ ನಾಯಕಿಯರಾಗಿ, ಶ್ರೀ ಶ್ರೀಕಾಂತ ಮಸಗಟ್ಟಿ, ಪೆಟ್ರೋಲ್ ಲೀಡರ್ ಶಿಬಿರದ ನಾಯಕರಾಗಿ ಕಾರ್ಯನಿರ್ವಹಿಸಿದರು.

## ಕೋಲಾರ

ನವೆಂಬರ್ 29 ರಂದು ಬಂಗಾರಪೇಟೆ ಹಾಗೂ ಕೆ.ಜಿ.ಎಫ್ ಸ್ಥಳೀಯ ಸಂಸ್ಥೆಯ ಸಹಯೋಗದೊಂದಿಗೆ ಸ್ಕೌಟರ್-ಗೈಡರ್ ಸಮಾವೇಶವನ್ನು ಬೇತಮಂಗಲದ ಭವಾನಿ ಶಾಲೆಯಲ್ಲಿ ಹಮ್ಮಿಕೊಳ್ಳಲಾಗಿತ್ತು. ಸಮಾವೇಶವನ್ನು ಕೋಲಾರ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಡಾ. ಚಂದ್ರಶೇಖರ್ ಉದ್ಘಾಟಿಸಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಬಂಗಾರಪೇಟೆಯ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಬಿ.ಪಿ. ಕೆಂಪಯ್ಯ ವಹಿಸಿದ್ದರು. ಸಮಾವೇಶದಲ್ಲಿ ಬಂಗಾರಪೇಟೆ ಹಾಗೂ ಕೆ.ಜಿ.ಎಫ್ ವಲಯಗಳ 150 ಶಿಕ್ಷಕ-ಶಿಕ್ಷಕಿಯರು ಭಾಗವಹಿಸಿದ್ದರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿದ ಶ್ರೀ ಬಿ.ಪಿ. ಕೆಂಪಯ್ಯನವರು, ಬಂಗಾರಪೇಟೆ ತಾಲ್ಲೂಕಿನ ಎಲ್ಲಾ ಶಾಲೆಗಳಲ್ಲಿ ಕಬ್-ಬುಲ್ ಬುಲ್ ಹಾಗೂ ಸ್ಕೌಟ್-ಗೈಡ್ ದಳಗಳನ್ನು ಪ್ರಾರಂಭಿಸಬೇಕೆಂದು ತಿಳಿಸಿದರು. ಕಾರ್ಯಕ್ರಮದಲ್ಲಿ ಉತ್ತಮವಾಗಿ ದಳಗಳನ್ನು ನಡೆಸುತ್ತಿರುವ ಕ್ರಿಯಾಶೀಲ ಸ್ಕೌಟರ್-ಗೈಡರ್‌ಗಳನ್ನು ಸನ್ಮಾನಿಸಲಾಯಿತು. ಕಾರ್ಯಕ್ರಮದಲ್ಲಿ ಜಿಲ್ಲಾ ಪದಾಧಿಕಾರಿಗಳು, ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಭಾಗವಹಿಸಿದ್ದರು.

* ನವೆಂಬರ್ 20 ರಂದು ಮಾಲೂರು ತಾಲ್ಲೂಕಿನ ಮಾಲೂರು ಪಟ್ಟಣದಲ್ಲಿನ ಮುರಾರ್ಜಿ ದೇಸಾಯಿ ವಸತಿ ಶಾಲೆಯಲ್ಲಿ ಹಾಗೂ ರಾಜೇನಹಳ್ಳಿಯಲ್ಲಿನ ಮುರಾರ್ಜಿ



ದೇಸಾಯಿ ವಸತಿ ಶಾಲೆಯಲ್ಲಿ ನೂತನ ಸ್ಕೌಟ್ಸ್-ಗೈಡ್ಸ್ ದಳವನ್ನು ಉದ್ಘಾಟಿಸಲಾಯಿತು. ಈ ಸಂದರ್ಭದಲ್ಲಿ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಮತ್ತು ಶಾಲೆಯ ಪ್ರಾಂಶುಪಾಲರು ಹಾಗೂ ಸಿಬ್ಬಂದಿ ಉಪಸ್ಥಿತರಿದ್ದರು.

* ನವೆಂಬರ್ 24 ರಂದು ಬಂಗಾರಪೇಟೆಯ ಜೈನ್ ಇಂಟರ್ ನ್ಯಾಷನಲ್ ಶಾಲೆಯಲ್ಲಿ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್ ಗಳಿಂದ ಶಾಲಾ ಆವರಣವನ್ನು ಸ್ವಚ್ಛಗೊಳಿಸುವ ಸೇವಾ ಶಿಬಿರವನ್ನು ಆಯೋಜಿಸಲಾಗಿತ್ತು. ಈ ಸಂದರ್ಭದಲ್ಲಿ ಶಾಲಾ ಮುಖ್ಯಸ್ಥರು ಹಾಗೂ ಸಿಬ್ಬಂದಿ ಉಪಸ್ಥಿತರಿದ್ದರು.

* ನವೆಂಬರ್ 24 ರಂದು ಕೋಲಾರ ಸ್ಥಳೀಯ ಸಂಸ್ಥೆ ವತಿಯಿಂದ ಕೋಲಾರ ನಗರದ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಆವರಣದ ಸ್ವಚ್ಛತಾ ಸೇವಾ ಶಿಬಿರವನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ನಾಗರಾಜ ಗೌಡ ರವರು ಉದ್ಘಾಟಿಸಿ ಸ್ಕೌಟ್ಸ್-ಗೈಡ್ಸ್‌ಗಳು ಸಾರ್ವಜನಿಕ ಆಸ್ತಿ ಸಂರಕ್ಷಣೆಗಾಗಿ ಮತ್ತು ಪರಿಸರ ಸಂರಕ್ಷಣೆಗಾಗಿ ಶ್ರಮಿಸುತ್ತಿರುವುದು ಶ್ಲಾಘನೀಯವಾದ ಸೇವೆ. ಇಂತಹ ಸಂಸ್ಥೆಯ ಬೆಳವಣಿಗೆಗೆ ಬೇಕಾದ ಸಹಕಾರ ನಾವು ನೀಡಲು ಸಿದ್ಧ ಎಂದು ತಿಳಿಸಿದರು. ಈ ಸಂದರ್ಭದಲ್ಲಿ ಕಛೇರಿ ಸಿಬ್ಬಂದಿ ಮತ್ತು ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.



* ನವೆಂಬರ್ 30 ರಂದು ಮಾಲೂರು ಸ್ಥಳೀಯ ಸಂಸ್ಥೆ ವ್ಯಾಪ್ತಿಯ ಎಸ್.ಎಫ್.ಎಸ್.ಶಾಲೆ ಹಾಗೂ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ತೊರ್ನಹಳ್ಳಿಯಲ್ಲಿ ನೂತನ ದಗಳಗಳಿಗೆ ಮಾಲೂರು ತಾಲ್ಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಮಾಧವರೆಡ್ಡಿ ರವರು ಚಾಲನೆ ನೀಡಿ ಈ ದಳಗಳು ಕ್ರಿಯಾಶೀಲವಾಗಿ ಮುನ್ನಡೆದು ತಾಲ್ಲೂಕು, ಜಿಲ್ಲೆ, ರಾಜ್ಯಕ್ಕೆ ಉತ್ತಮ ಹೆಸರನ್ನು ತಂದುಕೊಡಲಿ ಎಂದು ಶುಭಕೋರಿದರು. ಈ ಸಂದರ್ಭದಲ್ಲಿ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು, ಶಾಲಾ ಮುಖ್ಯಸ್ಥರು ಹಾಗೂ ಸಿಬ್ಬಂದಿ ಹಾಜರಿದ್ದು ಶುಭಕೋರಿದರು.

## ಮೈಸೂರು

ನವೆಂಬರ್ 3 ರಂದು ಶ್ರೀ ಜಯಚಾಮರಾಜೇಂದ್ರ ಸ್ಕೌಟ್-ಗೈಡ್ ಭವನ, ಮೈಸೂರು ಇಲ್ಲಿ ರೋವರ್ಸ್ ಮತ್ತು ರೇಂಜರ್ಸ್ ಚಟುವಟಿಕೆಗಳ ಬಗ್ಗೆ ಹೆಚ್ಚಿನ ಮಾಹಿತಿಯನ್ನು ನೀಡಲು ಮೈಸೂರು ಜಿಲ್ಲೆಯ ಎಲ್ಲಾ ಸರ್ಕಾರಿ / ಅನುದಾನಿತ / ಅನುದಾನರಹಿತ ಪದವಿ ಪೂರ್ವ ಕಾಲೇಜುಗಳ ಪ್ರಾಂಶುಪಾಲರುಗಳಿಗೆ ಒಂದು ದಿನದ ಮಾಹಿತಿ ಕಾರ್ಯಾಗಾರವನ್ನು ಆಯೋಜಿಸಲಾಗಿತ್ತು. 130 ಕಾಲೇಜುಗಳಿಂದ ಪ್ರಾಂಶುಪಾಲರು ಭಾಗವಹಿಸಿದ್ದರು. ಕಾರ್ಯಾಗಾರವನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಉದ್ಘಾಟಿಸಿ, ಇಂದಿನ ದಿನಗಳಲ್ಲಿ ಯುವಕರುಗಳಲ್ಲಿ ಶಿಸ್ತು, ಸ್ವಾವಲಂಬನೆ, ದೇಶಭಕ್ತಿಗಳನ್ನು ಬೆಳೆಸಲು ಈ ಸಂಸ್ಥೆ ಕಾರ್ಯ ನಿರ್ವಹಿಸುತ್ತಿದೆ. ಮುಂದಿನ ಜನಾಂಗವನ್ನು ಹಾಗೂ ಉತ್ತಮ ಸಮಾಜವನ್ನು ನಿರ್ಮಾಣ ಮಾಡುವುದು ನಮ್ಮೆಲ್ಲರ ಕರ್ತವ್ಯ ಎಂದು ತಿಳಿಸಿದರು.

ಡಾ. ದಯಾನಂದ್, ಉಪ ನಿರ್ದೇಶಕರು ಪದವಿ ಪೂರ್ವ ಮತ್ತು ವೃತ್ತಿ ಶಿಕ್ಷಣ ಇಲಾಖೆ, ಮೈಸೂರು ರವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಅವರು ಮಾತನಾಡಿ, ಪದವಿ ಪೂರ್ವ ಇಲಾಖೆಯ ಆದೇಶದ ಪ್ರಕಾರ ಎಲ್ಲಾ ಪದವಿ ಪೂರ್ವಕಾಲೇಜುಗಳಲ್ಲಿ ರೋವರ್ ಮತ್ತು ರೇಂಜರ್ ಘಟಕಗಳನ್ನು ಪ್ರಾರಂಭಿಸಿ ಸಂಸ್ಥೆಯವರು ನಡೆಸುವ ಮೂಲ ತರಬೇತಿ ಶಿಬಿರಗಳಿಗೆ ತಮ್ಮ ಕಾಲೇಜಿನಿಂದ ಉಪನ್ಯಾಸಕರುಗಳನ್ನು ನಿಯೋಜಿಸಿಕೊಟ್ಟು ವಿದ್ಯಾರ್ಥಿಗಳು ಈ ಚಟುವಟಿಕೆಯಲ್ಲಿ ಭಾಗವಹಿಸಲು ಅನುಕೂಲ ಮಾಡಿಕೊಡಬೇಕು ಎಂದು ತಿಳಿಸಿದರು. ಸಭೆಯ ಅಧ್ಯಕ್ಷತೆಯನ್ನು ಶ್ರೀ ಪಿ. ವಿಶ್ವನಾಥ್, ಜಿಲ್ಲಾ ಮುಖ್ಯ ಆಯುಕ್ತರು ವಹಿಸಿದ್ದರು. ಶ್ರೀ ಅಬ್ದುಲ್ ಜಮೀಲ್, ಜಿಲ್ಲಾ ಕಾರ್ಯದರ್ಶಿಯವರು ಸ್ವಾಗತ ಕೋರಿದರು. ಶ್ರೀಮತಿ ಸುಜಯಾ, ಜಂಟಿ ಜಿಲ್ಲಾ ಕಾರ್ಯದರ್ಶಿಯವರು ವಂದನಾರ್ಪಣೆ ಮಾಡಿದರು. ಶ್ರೀ ರಾಮಪ್ರಸಾದ್ ಜಿಲ್ಲಾ ಸಂಘಟಕರು ಕಾರ್ಯಕ್ರಮವನ್ನು ನಿರೂಪಿಸಿದರು. ಶ್ರೀ ಎಂ.ಎ. ಚೆಲ್ಲಯ್ಯ, ಬಿ.ಬಿ.ಎಂ.ಪಿ. ಜಿಲ್ಲಾ ಸಂಸ್ಥೆ ಕೋಆರ್ಡಿನೇಟರ್, ಶ್ರೀಮತಿ ಜಾನಕಿ ವೇಣುಗೋಪಾಲ್, ಕೇಂದ್ರ ಸ್ಥಾನಿಕ ಆಯುಕ್ತರು (ಗೈಡ್ಸ್), ಶ್ರೀ ಟಿ.ಎಸ್. ರವಿಶಂಕರ್ ಜಿಲ್ಲಾ ಆಯುಕ್ತರು(ಸ್ಕೌಟ್ಸ್), ಶ್ರೀ ಆರ್.ಪಿ. ಚಂದ್ರು, ಜಿಲ್ಲಾ ಸಂಘಟಕರು ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಕಾರ್ಯಕ್ರಮದಲ್ಲಿ ಉಪಸ್ಥಿತಿರಿದ್ದರು.

ಡಾ. ಜಿ. ಸಿದ್ದೇಶ್, ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್-ಗೈಡ್ಸ್, ಜಿಲ್ಲಾ ಸಂಸ್ಥೆ, ಮೈಸೂರು, ಶ್ರೀ ಕೆ.ಜಿ. ಗೋಪಾಲಕೃಷ್ಣ ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್) ಸಂಪನ್ಮೂಲ ವ್ಯಕ್ತಿಗಳಾಗಿ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.



# ರಾಯಚೂರು

ಜೀವನದಲ್ಲಿ ಕನಸುಗಳು ಇದ್ದರೆ ಮಾತ್ರ ನಮ್ಮ ಗುರಿ ಸಾಧಿಸಲು ಸಾಧ್ಯ ಎಂದು ವಿಕಾಸ ಸಂಗಮದ ರಾಷ್ಟ್ರೀಯ ಸಂರಕ್ಷಕ ಶ್ರೀ ಬಸವರಾಜ ಪಾಟೀಲ್ ಸೇಡಂ ಹೇಳಿದರು. ಪಟ್ಟಣದ ಭ್ರಮರಾಂಬ ದೇವಸ್ಥಾನದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳ ಜಿಲ್ಲಾ ಮಟ್ಟದ ಮೂರು ದಿನಗಳ ತರಬೇತಿ ಶಿಬಿರದ ಸಮಾರೋಪ ಸಮಾರಂಭದಲ್ಲಿ ಮಾತನಾಡಿದರು. ತರಬೇತುದಾರ ಡಾ॥ ಭರಶೆಟ್ಟಿ, ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ತಾಲ್ಲೂಕು ಘಟಕದ ಅಧ್ಯಕ್ಷ ಡಾ. ಮಲ್ಲಿಕಾರ್ಜುನ ಇತ್ಲಿ, ಶ್ರೀಮತಿ ಅಜೀಜಾ ಸುಲ್ತಾನ್ ಉಪಸ್ಥಿತರಿದ್ದರು. ಶ್ರೀ ವೀರೇಶ ಸೌದ್ರಿ ನಿರೂಪಿಸಿದರು

* ನವೆಂಬರ್ 22 ರಿಂದ 24 ರ ವರೆಗೆ ರಾಯಚೂರು ಜಿಲ್ಲಾ ಮಟ್ಟದ ಜಿಲ್ಲಾ ಪುರಸ್ಕಾರ್ ಪರೀಕ್ಷಾ ಶಿಬಿರವನ್ನು ಜಿಲ್ಲಾ ಸಂಸ್ಥೆ, ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು, ಶ್ರೀ ಭ್ರಮರಾಂಭ ದೇವಸ್ಥಾನ ಹಾಗೂ ಸ್ಥಳೀಯ ಸಂಸ್ಥೆ, ಮಸ್ಕಿ ಇವರುಗಳ ಸಹಯೋಗದಲ್ಲಿ ಶ್ರೀ ಭ್ರಮರಾಂಭ ಮಲ್ಲಿಕಾರ್ಜುನ ದೇವಸ್ಥಾನದಲ್ಲಿ ಹಮ್ಮಿಕೊಳ್ಳಲಾಗಿತ್ತು. ಶ್ರೀ ಬಸವರಾಜ ಬೋರೆಡ್ಡಿ, ಜಿಲ್ಲಾ ಆಯುಕ್ತರು (ಸ್ಕೌ) ಇವರು ಸಸಿಗೆ ನೀರು ಉಣಿಸುವುದರ ಮೂಲಕ ಶಿಬಿರಕ್ಕೆ ಚಾಲನೆ ನೀಡಿದರು. ನಂತರ ಮಾತನಾಡಿ, ಸಮೃದ್ಧ ದೇಶಕಟ್ಟುವಲ್ಲಿ ಸ್ಕೌಟ್ಸ್-ಗೈಡ್ಸ್‌ಗಳ ಪಾತ್ರ ಅವಿಸ್ಮರಣೀಯವಾದದ್ದು. ಕನಸನ್ನು ನನಸಾಗಿಸಲು ಶ್ರದ್ಧೆ ಮತ್ತು ಪರಿಶ್ರಮ ಮುಖ್ಯ, ಇದಕ್ಕಾಗಿ ಸ್ಕೌಟ್ಸ್-ಗೈಡ್ಸ್ ಗಳು ಅವಿರತವಾಗಿ ಶ್ರಮಹಿಸಬೇಕು ಎಂದರು.

ಮುಖ್ಯ ಅತಿಥಿಗಳಾಗಿ ಶ್ರೀ ಎಸ್. ಶರಣೇಗೌಡ, ಅಧ್ಯಕ್ಷರು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಸಿಂಧನೂರು ಇವರು ಮಾತನಾಡಿ, ಮಕ್ಕಳು ದೇಶಾಭಿಮಾನಿ-ಗಳಾಗಿ ಸೇವೆಯ ಮನೋಭಾವ ಬೆಳೆಸಿಕೊಂಡು ತಮ್ಮ ಸೇವೆಯನ್ನು ಇತರರಿಗೆ ಮಾರ್ಗದರ್ಶಕರಾಗುವಂತೆ ಕೆಲಸ





ಮಾಡಲು ಸಲಹೆ ನೀಡಿದರು. ಉದ್ಘಾಟನಾ ಸಮಾರಂಭದಲ್ಲಿ ಶ್ರೀ ರಾವುತರಾವ್ ಬರೂರ, ನಿಕಟಪೂರ್ವ ಜಿಲ್ಲಾ ಸಂಘಟನಾ ಆಯುಕ್ತರು (ಸ್ಕೌ) ಇವರು ಮಾತನಾಡಿ, ಅಚ್ಚುಕಟ್ಟಾಗಿ ಶಿಬಿರದ ವ್ಯವಸ್ಥೆ ಮಾಡಿರುವ ನೂತನ ಸ್ಥಳೀಯ ಸಂಸ್ಥೆಯ ಕಾರ್ಯವನ್ನು ಶ್ಲಾಘಿಸಿ ಎಲ್ಲ ಪದಾಧಿಕಾರಿಗಳಿಗೆ ಅಭಿನಂದಿಸಿದರು. ಈ ಸಂದರ್ಭದಲ್ಲಿ ಡಾ. ಶಿವಶರಣಪ್ಪ ಇತ್ಲಿ, ಉಪಾಧ್ಯಕ್ಷರು, ಸ್ಥಳೀಯ ಸಂಸ್ಥೆ, ಲಿಂಗಸಗೂರು, ಶ್ರೀ ಮಹಂತೇಶ ಮಸ್ಕಿ, ಎ.ಡಿ.ಸಿ.(ಸ್ಕೌ), ಶ್ರೀಮತಿ ನಿವೇದಿತಾ ಇತ್ಲಿ, ಎ.ಡಿ.ಸಿ.(ಗೈ) ಶ್ರೀ ಹೆಚ್. ಶಿವಪ್ಪ ಕಾರ್ಯದರ್ಶಿ ಉಪಸ್ಥಿತರಿದ್ದರು. ಸಮಾರಂಭದ ಅಧ್ಯಕ್ಷತೆಯನ್ನು ಡಾ. ಮಲ್ಲಿಕಾರ್ಜುನ ಇತ್ಲಿ, ಅಧ್ಯಕ್ಷರು, ಸ್ಥಳೀಯ ಸಂಸ್ಥೆ, ಮಸ್ಕಿ ಅವರು ವಹಿಸಿದ್ದರು. ಸ್ಕೌಟ್ ವಿಭಾಗದ ಶಿಬಿರದ ನಾಯಕರಾದ ಡಾ. ಬಿ.ಹೆಚ್. ಭರಶೆಟ್ಟಿ, ಕಾರ್ಯದರ್ಶಿಗಳು, ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ಬೀದರ ಹಾಗೂ ಗೈಡ್ ವಿಭಾಗದ ನಾಯಕಿಯಾದ ಶ್ರೀಮತಿ ಅಜೀಜಾ ಸುಲ್ತಾನ ಎಲ್.ಟಿ.(ಗೈ) ಹಾಗೂ ಸ್ಥಳೀಯ ಸಂಸ್ಥೆ ಮತ್ತು ದೇವಸ್ಥಾನ ಸಮಿತಿಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

ನವೆಂಬರ್ 24 ರಂದು ಶಿಬಿರದ ಸಮಾರೋಪ ಸಮಾರಂಭ ಹಮ್ಮಿಕೊಳ್ಳಲಾಯಿತು ಸಮಾರಂಭದ ಮುಖ್ಯ ಅತಿಥಿಗಳಾಗಿ ಸನ್ಮಾನ್ಯ ಶ್ರೀ ಬಸವರಾಜ ಪಾಟೀಲ್ ಸೇಡಂ, ಮಾಜಿ ರಾಜ್ಯ ಸಭಾ ಸದಸ್ಯರು ಆಗಮಿಸಿದ್ದರು. ಅವರು ಮಾತನಾಡಿ, ಜೀವನದಲ್ಲಿ ಕನಸುಗಳು ಇದ್ದರೆ ಮಾತ್ರ ನಮ್ಮ ಗುರಿ ಸಾಧಿಸಲು ಸಾಧ್ಯವಾಗುತ್ತದೆ. ಜೀವನದಲ್ಲಿ ದೊಡ್ಡ ಗುರಿ ಹೊಂದಿರಬೇಕು, ಅದಕ್ಕಾಗಿ ದೊಡ್ಡ ಕನಸು ಹೊಂದಿದಾಗ ಮಾತ್ರ ನಮ್ಮ ದೇಶ ಸದೃಢವಾಗಲು ಸಾಧ್ಯ ಎಂದರು. ಸಮಾರಂಭದ ಅಧ್ಯಕ್ಷತೆಯನ್ನು ಡಾ ಮಲ್ಲಿಕಾರ್ಜುನ ಇತ್ಲಿ, ಅಧ್ಯಕ್ಷರು, ಸ್ಥಳೀಯ ಸಂಸ್ಥೆ, ಮಸ್ಕಿ ಇವರು ವಹಿಸಿದ್ದರು. ಈ ಸಂದರ್ಭದಲ್ಲಿ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು. ಈ ಶಿಬಿರದಲ್ಲಿ 415 ಸ್ಕೌಟ್ಸ್, 272 ಗೈಡ್ಸ್‌ಗಳು ಭಾಗವಹಿಸಿದ್ದರು.

## ಶಿವಮೊಗ್ಗ

ಡಿಸೆಂಬರ್ 18 ರಂದು ಕರ್ನಾಟಕ ದರ್ಶನಕ್ಕೆ ಹೊರಡುವ ಸ್ಕೌಟ್ಸ್ ಮತ್ತು ಗೈಡ್ಸ್ ಗಳಿಗೆ ಶುಭಹಾರೈಕೆಯ ಸಮಾರಂಭವನ್ನು ಜಿಲ್ಲಾ ಸ್ಕೌಟ್ ಭವನದಲ್ಲಿ ಏರ್ಪಡಿಸಲಾಗಿತ್ತು.

ಸಮಾರಂಭದ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಹೆಚ್.ಡಿ.ರಮೇಶಶಾಸ್ತ್ರಿ ರವರು ವಹಿಸಿದ್ದರು. ಮುಖ್ಯ ಅತಿಥಿಯಾಗಿ ಉಪನಿರ್ದೇಶಕರಾದ ಶ್ರೀಮತಿ ಸುಮಂಗಳಾ ಪಿ. ಕುಚಿನಾಡ ರವರು ಆಗಮಿಸಿ ಮಕ್ಕಳಿಗೆ ಪ್ರವಾಸದ ವೇಳೆಯಲ್ಲಿ ಯಾವ ರೀತಿ ವರ್ತಿಸಬೇಕು ಹಾಗೂ ನೋಡಿದ ಸ್ಥಳಗಳ ಬಗ್ಗೆ ಮಾಹಿತಿ ಪಡೆದುಕೊಂಡು ಬೆರೆಯುವರಿಗೂ ಹಂಚಬೇಕು ಸಂತೊಷದಿಂದ ಹೋಗಿ ಬನ್ನಿ ಎಂದು ಮಕ್ಕಳೆಲ್ಲರಿಗೂ ಶುಭ ಕೋರಿದರು. ನಂತರ ಅವರಿಂದ ಮಕ್ಕಳಿಗೆ ದರ್ಶನದ ಕಿಟ್‌ನ್ನು ಕೋಡಿಸಲಾಯಿತು. ಜಿಲ್ಲಾ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು, ಪೊಷಕರು ಉಪಸ್ಥಿತರಿದ್ದರು.

* ಡಿಸೆಂಬರ್ 19 ರಂದು ಕರ್ನಾಟಕ ದರ್ಶನಕ್ಕೆ ಹೊರಡುವ ಸ್ಕೌಟ್ಸ್ ಮತ್ತು ಗೈಡ್ಸ್ ಗಳಿಗೆ ಹಸಿರು ನಿಶಾನೆ ತೋರಿಸಿ ಚಾಲನೆ ನೀಡಲು ಶಿವಮೊಗ್ಗ ಜಿಲ್ಲಾ ಸಂಸ್ಥೆಯ ಅಧ್ಯಕ್ಷರು ಹಾಗೂ ಜಿಲ್ಲೆಯ ಜಿಲ್ಲಾಧಿಕಾರಿ ಶ್ರೀ ಕೆ.ದಯಾನಂದ ಭಾ.ಆ.ಸೇ ರವರು ಆಗಮಿಸಿ ಮಕ್ಕಳೊಂದಿಗೆ ಮಾತನಾಡಿ ಪ್ರವಾಸ ಮನೊರಂಜನೆಯಲ್ಲ ಮನೋವಿಕಾಸವನ್ನು ವೃದ್ಧಿಸುತ್ತದೆ. ಸಮಾಜವನ್ನು ಅರ್ಥಮಾಡಿಕೊಂಡು ವಿವಿಧ ರೀತಿಯ ಜೀವನ ಶೈಲಿಯನ್ನು ತಿಳಿದುಕೊಳ್ಳುತ್ತೇವೆ, ಪ್ರವಾಸ ಅಂದರೆ ಕೇವಲ ನಿದ್ದೆಮಾಡಿಕೊಂಡು ಸಮಯ ಕಳೆಯುವುದಲ್ಲ ಪ್ರತಿಯೊಂದು ಕ್ಷಣವನ್ನು ಸಂತೊಷದಿಂದ ಕಳೆಯುವಂತಹದು. ಪ್ರತಿ ಸ್ಥಳದಲ್ಲೂ ಭೇಟಿ ನೀಡಿದಾಗ





ಅಲ್ಲಿಯ ಆಚಾರ-ವಿಚಾರ, ಉಡುಪು, ಸಂಸ್ಕ್ರತಿ ಬಗ್ಗೆ ತಿಳಿದುಕೊಂಡರೆ ನಮ್ಮ ಜ್ಞಾನ ವೃದ್ಧಿಸುತ್ತದೆ. ತಮ್ಮ ಅನುಭವವನ್ನು ಪ್ರಬಂದಧ ಮೂಲಕ ವ್ಯಕ್ತಪಡಿಸಿದ್ದಲ್ಲಿ ಉತ್ತಮ ಪ್ರಬಂಧಗಾರರಿಗೆ ಬಹುಮಾನ ನೀಡಲಾಗುವುದು ಎಂದು ತಿಳಿಸಿದರು. ಜಿಲ್ಲಾ ಪದಾಧಿಕಾರಿಗಳಾದ ಶ್ರೀ ಹೆಚ್.ಡಿ. ರಮೇಶಶಾಸ್ತ್ರಿ ಡಿಸಿಸಿ, ಶ್ರೀ ಉಮೇಶ ಶಾಸ್ತ್ರಿ ಡಿಸಿ(ಎಸ್), ಶ್ರೀಮತಿ ಶಕುಂತಲಾ ಚಂದ್ರಶೇಖರ್ ಡಿಸಿ(ಜಿ), ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ ಉಪಸ್ಥಿತರಿದ್ದರು.

## ಕೊಡಗು

ಕೊಡಗು ಜಿಲ್ಲಾ ಸಂಸ್ಥೆಯಿಂದ ಡಿಸೆಂಬರ್ 12ರಂದು ಮಡಿಕೇರಿಯ ಶ್ರೀ ಓಂಕಾರೇಶ್ವರ ದೇವಸ್ಥಾನದ ಆವರಣದಲ್ಲಿ ಸ್ಕೌಟ್ಸ್‌ಗಳಿಂದ ಸ್ವಚ್ಛತಾ ಅಂದೋಲನ ಏರ್ಪಡಿಸಲಾಗಿತ್ತು. ಕಾರ್ಯಕ್ರಮದಲ್ಲಿ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಭಾಗವಹಿಸಿದ್ದರು.



## ಉಡುಪಿ

ನಮ್ಮ ಶಿಕ್ಷಣ ಪದ್ಧತಿಯಲ್ಲಿ ಹೊಸತನ ಬೇಕಾಗಿದೆ, ವಿದ್ಯಾರ್ಥಿಗಳನ್ನು ತರಗತಿಯ ನಾಲ್ಕು ಗೋಡೆಗಳಿಂದ ಹೊರಗೆ ಕರೆದುಕೊಂಡು ಹೋಗಿ ಸಮಾಜದಲ್ಲಿ ಅವರಿಗೆ ಬದುಕಿನ ಶಿಕ್ಷಣ ಕೊಡಬೇಕಾಗಿರುವುದು ಇಂದಿನ ಅಗತ್ಯವಾಗಿದೆ ಎಂದು ಬ್ರಹ್ಮಾವರ್ ರೋಯಲ್ ರೋಟರಿ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಉಮೇಶ್ ನಾಯ್ಕ್ ನುಡಿದರು. ಅವರು ಬ್ರಹ್ಮಾವರದ ನಿರ್ಮಲಾ ಆಂಗ್ಲ ಮಾಧ್ಯಮ ಶಾಲೆಯ ಬೆಳ್ಳಿ ಹಬ್ಬದ ಅಂಗವಾಗಿ ಬ್ರಹ್ಮಾವರ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆಯ ಸಹಯೋಗದೊಂದಿಗೆ ಆಯೋಜಿಸಲಾದ ಉಡುಪಿ ಜಿಲ್ಲಾ ಮಟ್ಟದ ಎರಡು ದಿನಗಳ ಕಬ್-ಬುಲ್‌ಬುಲ್ ಉತ್ಸವದ ಉದ್ಘಾಟನೆ ನೆರವೇರಿಸಿ ಮಾತನಾಡಿದರು. ಶಾಲೆಯ ಮುಖ್ಯೋಪಾಧ್ಯಾಯರಾದ ವಂದನೀಯ ಜಸ್ಲಿ ಡಿಸಿಲ್ವ ಆಶೀರ್ವಚನ ನೀಡಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀಮತಿ ಶಾಂತಾ ವಿ. ಆಚಾರ್ಯ ಅಧ್ಯಕ್ಷತೆ ವಹಿಸಿದ್ದರು. ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಮಧುಕರ್ ಕಾರ್ಯಕ್ರಮಕ್ಕೆ ಶುಭ ಕೋರಿದರು. ಉದ್ಘಾಟನಾ ಸಮಾರಂಭದಲ್ಲಿ ಜಿಲ್ಲಾ ಸ್ಕೌಟ್ ಆಯುಕ್ತ ಡಾ. ವಿಜಯೇಂದ್ರ ವಸಂತ್, ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಾದ ಶ್ರೀಮತಿ ಗುಣರತ್ನ, ಶ್ರೀ ಜಯಚಂದ್ರ, ಶ್ರೀ ಆನಂದ ಅಡಿಗ, ಡಾ. ಜಯರಾಮ್ ಶೆಟ್ಟಿಗಾರ್, ಶ್ರೀ ಉಮೇಶ್ ಪೈ, ಶ್ರೀ ಪ್ರಭಾಕರ ಆಚಾರ್ಯ, ನಿತಿನ್ ಅಮಿನ್, ಸುಮನ್ ಶೇಕರ್ ಮೊದಲಾದವರು ಉಪಸ್ಥಿತರಿದ್ದರು. ಶ್ರೀಮತಿ ಶಾರದಾ ಮತ್ತು ರಮಾ ಶೆಟ್ಟಿ ನಿರ್ವಹಿಸಿದ ಈ ಕಾರ್ಯಕ್ರಮದಲ್ಲಿ ಶ್ರೀಮತಿ ಅನುರಾಧಾ ಸ್ವಾಗತಿಸಿದರೆ, ಶ್ರೀ ಎಲ್.ಟಿ. ಭಟ್ ಧನ್ಯವಾದ ಸಮರ್ಪಿಸಿದರು. ಕಬ್-ಬುಲ್‌ಬುಲ್ ಉತ್ಸವದಲ್ಲಿ ಉಡುಪಿ ಜಿಲ್ಲೆಯ 38 ಶಾಲೆಗಳಿಂದ 346 ವಿದ್ಯಾರ್ಥಿಗಳು ಹಾಗೂ 48 ಶಿಕ್ಷಕರು, ಜಿಲ್ಲಾ ಸಂಸ್ಥೆ, ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಪಾಲ್ಗೊಂಡಿದ್ದರು.





## ವಿಜಯಪುರ

ನವೆಂಬರ್ 2 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಗ್ರಾಮೀಣ ವಲಯ ವಿಜಯಪುರ ವತಿಯಿಂದ ತಾಲೂಕ ಮಟ್ಟದ ದ್ವಿತೀಯ ಸೋಪಾನ್ ಪರೀಕ್ಷಾ ಶಿಬಿರವನ್ನು ದಿ. ವಾಸಂತಿಬಾಯಿ ಜಿಗಜಿನ್ನಿ, ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರ, ಬುರಣಾಪುರದಲ್ಲಿ ಏರ್ಪಡಿಸಲಾಗಿತ್ತು.

ಈ ಶಿಬಿರದ ಉದ್ಘಾಟನಾ ಕಾರ್ಯಕ್ರಮದ ಅಧ್ಯಕ್ಷಸ್ಥಾನವನ್ನು ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ-ಗಳಾದ ಶ್ರೀ ಎಂ.ಎಸ್. ಮಠಪತಿಯವರು ವಹಿಸಿದ್ದರು. ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಎಸ್.ಸಿ. ಶೇಡಶ್ಯಾಳ ಸಸಿಗೆ ನೀರೆರೆಯುವುದರ ಮೂಲಕ ಶಿಬಿರವನ್ನು ಉದ್ಘಾಟಿಸಿದರು. ಈ ಕಾರ್ಯಕ್ರಮದಲ್ಲಿ ಅತಿಥಿಗಳಾಗಿ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ, ಜಿಲ್ಲಾ ಸಂಸ್ಥೆ ಸಂಘಟಕರಾದ ಶ್ರೀ ಪ್ರಕಾಶ್ ಹದ್ಲಿ, ರಾಜ್ಯ ಸಹಾಯಕ ಸಂಘಟಕರಾದ ಶ್ರೀ ನಾಗೇಶ್ ಶಿವಪೂರ ಭಾಗವಹಿಸಿದ್ದರು. ಸ್ಕೌಟ್ ವಿಭಾಗದ ಶಿಬಿರದ ನಾಯಕರಾಗಿ ಶ್ರೀ ಬಿ.ಎಂ. ಬಡಿಗೇರ ಹಾಗೂ ಗೈಡ್ ವಿಭಾಗದ ನಾಯಕಿಯಾಗಿ ಶ್ರೀಮತಿ ಲತಾ ಬಿರಾದಾರ ಪಾಲ್ಗೊಂಡಿದ್ದರು. ಸದರಿ ಶಿಬಿರದಲ್ಲಿ 262 ಸ್ಕೌಟ್ಸ್, 112 ಗೈಡ್ಸ್, 8 ಗೈಡ್ ಕ್ಯಾಪ್ಟನ್ಸ್ ಹಾಗೂ 23 ಸ್ಕೌಟ್ ಮಾಸ್ಟರ್‌ಗಳು ಭಾಗವಹಿಸಿದ್ದರು. ಕಾರ್ಯಕ್ರಮವನ್ನು ಸ್ಥಳೀಯ ಸಂಸ್ಥೆಯ ಸಹಕಾರ್ಯದರ್ಶಿಯಾದ ಶ್ರೀ ಎ.ಎಂ. ಖೋತ ರವರು ಕಾರ್ಯಕ್ರಮವನ್ನು ನಿರೂಪಿಸಿದರು.

ನವೆಂಬರ್ 3 ರಂದು ನಡೆದ ಸಮಾರೋಪ ಸಮಾರಂಭದ ಅಧ್ಯಕ್ಷ ಸ್ಥಾನವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಸಿದ್ದಣ್ಣ ಸಕ್ರಿಯವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಎಸ್.ಸಿ. ಶೇಡಶ್ಯಾಳ, ಸಹಕಾರ್ಯದರ್ಶಿಗಳಾದ ಶ್ರೀ





ಶರಣು ಸಬರದ, ಕಾರ್ಯದರ್ಶಿಗಳಾದ ಶ್ರೀ ಎಸ್.ಎಸ್. ಬೊಮ್ಮನಳ್ಳಿ ಉಪಸ್ಥಿತರಿದ್ದರು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಎಂ.ಎಸ್. ಮಠಪತಿಯವರು ಸ್ವಾಗತಿಸಿ ವಂದಿಸಿದರು. ಸ್ಥಳೀಯ ಸಂಸ್ಥೆಯ ಸಹಕಾರ್ಯದರ್ಶಿಯಾದ ಶ್ರೀ ಎ.ಎಂ. ಖೋತ ರವರು ಕಾರ್ಯಕ್ರಮವನ್ನು ನಿರೂಪಿಸಿದರು.

* ನವೆಂಬರ್ 9 ರಿಂದ 10ರ ವರೆಗೆ ಬಸವನಬಾಗೇವಾಡಿ ತಾಲೂಕಿನ ದ್ವಿತೀಯ ಸೋಪಾನ್ ಪರೀಕ್ಷಾ ಶಿಬಿರವನ್ನು ಶ್ರೀ ಬಸವೇಶ್ವರ ದೇವಸ್ಥಾನ ಅಂತರಾಷ್ಟ್ರೀಯ ಶಾಲೆ, ಬಸವನಬಾಗೇವಾಡಿಯಲ್ಲಿ ಆಯೋಜಿಸಲಾಗಿತ್ತು. ಈ ಶಿಬಿರದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಸಿದ್ದಣ್ಣಾ ಎಸ್. ಜಾಲಗೇರಿ, ಅಧ್ಯಕ್ಷರು, ಸ್ಕೌಟ್-ಗೈಡ್ ಸ್ಥಳೀಯ ಸಂಸ್ಥೆ, ಬಸವನಬಾಗೇವಾಡಿ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಮಹೇಶ್ ಎಂ. ಮುಳವಾಡ ಶ್ರೀ ಶಿವಲಿಂಗಯ್ಯ ತೆಗ್ಗಿನಮಠ, ಶ್ರೀ ರಾಜು ಚಿಕ್ಕೊಂಡ, ಶ್ರೀಮತಿ ಸೀತಮ್ಮ ವಾಡೇದ, ಡಾ. ವೀಣಾ ಎಂ. ಗುಳೇದಗುಡ್ಡ, ಶ್ರೀಮತಿ ಸ್ವರೂಪಾರಾಣಿ ಬಿಂಜಲಭಾವಿ, ಉಪಾಧ್ಯಕ್ಷರು ಸ್ಥಳೀಯ ಸಂಸ್ಥೆ ಇವರು ಹಾಗೂ ಶ್ರೀ ಪ್ರಕಾಶ ಹದ್ಲಿ (ಡಿ.ಓ.ಸಿ.) ಉಪಸ್ಥಿತರಿದ್ದರು.



ಶಿಬಿರದ ನಾಯಕರಾಗಿ ಸ್ಕೌಟ್ ವಿಭಾಗದಿಂದ ಶ್ರೀ ಎಸ್.ಬಿ. ಭಜಂತ್ರಿ, ಜಿಲ್ಲಾ ತರಬೇತಿ ಆಯುಕ್ತರು, ಗೈಡ್ ವಿಭಾಗದಿಂದ ನಾಯಕಿಯಾಗಿ ಶ್ರೀಮತಿ ಎಸ್.ವ್ಹಿ. ಬಡಿಗೇರ ಇವರುಗಳು ಕಾರ್ಯನಿರ್ವಹಿಸಿದರು.

ಸದರಿ ಶಿಬಿರದಲ್ಲಿ ತಾಲೂಕಿನ ಒಟ್ಟು 87 ಸ್ಕೌಟ್ಸ್ ಮತ್ತು 67 ಗೈಡ್ಸ್, 7 ಗೈಡ್ ಕ್ಯಾಪ್ಟನ್‌ಗಳು ಹಾಗೂ 10 ಸ್ಕೌಟ್ ಮಾಸ್ಟರ್‌ಗಳು ಭಾಗವಹಿಸಿದ್ದರು.

ನವೆಂಬರ್ 10 ರಂದು ಸಂಜೆ ಜರುಗಿದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಸ್ಕೌಟ್-ಗೈಡ್ ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ಸಿದ್ದಣ್ಣ ಜಾಲಗೇರಿ, ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಮಂಜುನಾಥ. ಎ. ಗುಳೇದಗುಡ್ಡ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಶ್ರೀಮತಿ ಸ್ವರೂಪಾರಾಣಿ ಬಿಂಜಲಭಾವಿ ಉಪಾಧ್ಯಕ್ಷರು, ಡಾ. ವೀಣಾ ಎಂ. ಗುಳೇದಗುಡ್ಡ ಉಪಾಧ್ಯಕ್ಷರು, ಶ್ರೀ ರಾಜು ಚಿಕ್ಕೊಂಡ ಇವರುಗಳು ಹಾಜರಿದ್ದರು.

* ನವೆಂಬರ್ 22 ರಿಂದ 23 ರ ವರೆಗೆ ಜಿಲ್ಲೆಯ ಇಂಡಿ ತಾಲೂಕಿನ ಸುಕ್ಷೇತ್ರ ಲಚ್ಯಾಣ ಗ್ರಾಮದ ಮಾದರಿ ಪ್ರಾಥಮಿಕ ಶಾಲೆಯು ಶತಮಾನ ಕಂಡ ಶಾಲೆಯಾಗಿದ್ದು, 2 ದಿನಗಳ ಕಾಲ ನಡೆದ ಶತಮಾನೋತ್ಸವ ಕಾರ್ಯಕ್ರಮದಲ್ಲಿ ಶಾಲೆಯ ಕಿತ್ತೂರ ರಾಣಿ ಚೆನ್ನಮ್ಮ ಗೈಡ್ ಕಂಪನಿ ಮತ್ತು ನೇತಾಜಿ ಸುಭಾಷಚಂದ್ರ ಭೋಸ್ ಸ್ಕೌಟ್ಸ್ ದಳ ಸರಕಾರಿ ಪ್ರೌಢ ಶಾಲೆಯ ಗೈಡ್ ದಳದ ವಿದ್ಯಾರ್ಥಿನಿಯರು ಸ್ವಯಂ ಸೇವಕರಾಗಿ ಸೇವೆ ಸಲ್ಲಿಸಿದರು.

## ಯಾದಗಿರಿ

* ಡಿಸೆಂಬರ್ 6 ರಂದು ಶಹಾಪೂರ ತಾಲೂಕಾ ಸ್ಕೌಟರ್-ಗೈಡರ್‌ಗಳ ಒಂದು ದಿನ ಸಮಾವೇಶ ಎಸ್.ಬಿ ದೇಶಮುಖ ಪದವಿ ಕಾಲೇಜಿನಲ್ಲಿ ನಡೆಯಿತು. ಈ ಕಾರ್ಯಕ್ರಮವನ್ನು ಶ್ರೀ ಶಿವರಾಜ ದೇಶಮುಖ ಉದ್ಘಾಟಿಸಿದರು. ಶ್ರೀ ಮಾಗಿಲಾಲ ಜೈನ್ ಅಧ್ಯಕ್ಷತೆ ವಹಿಸಿದ್ದರು. ಶ್ರೀ ಸುಧಾಕರ್ ಗುಡಿ, ಜಿಲ್ಲಾ ಉಪಾಧ್ಯಕ್ಷರು, ಶ್ರೀ ಚಂದ್ರಶೇಖರ ವೈದ್ಯ ತಾಲೂಕಾ ದೈಹಿಕ ಶಿಕ್ಷಣ ಪರಿವೀಕ್ಷಕರು, ಶ್ರೀಮತಿ ನಾಗರತ್ನ ಪಾಟೀಲ, ಜಿಲ್ಲಾ ಸಂಘಟಕರು, ಶ್ರೀ ಬಸವರಾಜ ಎಂ. ಗೋಗಿ ತಾಲ್ಲೂಕ ಕಾರ್ಯದರ್ಶಿ, ಶ್ರೀ ರಾಜಶೇಖರ ದೇಸಾಯಿ, ಕಾರ್ಯದರ್ಶಿ ಸುರಪುರ ಹಾಜರಿದ್ದರು.



## ಶ್ರದ್ಧಾಂಜಲಿ



ದಿನಾಂಕ 30-11-2018 ರಂದು ರಾಯಚೂರು ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಅಲಿಯಾ ಖಾನಂ ರವರ ತಾಯಿ **ಶ್ರೀಮತಿ ಸಜಲುನ್ನಿಸಾ ಬೇಗಂ** ರವರು ಮರಣ ಹೊಂದಿರುವ ವಿಷಯ ತಿಳಿಸಲು ವಿಷಾಧಿಸುತ್ತೇವೆ. ಅವರಿಗೆ 93 ವರ್ಷ ವಯಸ್ಸಾಗಿತ್ತು. ಅವರು ಇತ್ತೀಚಿನ ಜಿಲ್ಲೆಯ ಸ್ಕೌಟ್ಸ್-ಗೈಡ್ಸ್ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದರು. ದಿವಂಗತರ ಆತ್ಮಕ್ಕೆ ಚಿರಶಾಂತಿ ನೀಡಲೆಂದು ಹಾಗು ಅವರ ನಿಧನದಿಂದ ಉಂಟಾದ ದುಃಖವನ್ನು ಭರಿಸಲು ಕುಟುಂಬದವರಿಗೆ ಶಕ್ತಿಯನ್ನು ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

**- ರಾಜ್ಯ ಕಾರ್ಯದರ್ಶಿ**

## ಶ್ರದ್ಧಾಂಜಲಿ

# ರಾಜಕೀಯ ದುರೀಣ, ಹಿರಿಯ ನಾಯಕ
# ಶ್ರೀ ಸಿ.ಕೆ.ಜಾಫರ್ ಷರೀಫ್

ಭಾರತೀಯ ರೈಲ್ವೇಯನ್ನು ಆಧುನೀಕರಣಗೊಳಿಸುವ ಕ್ರಿಯೆಯಲ್ಲಿ ದಾಪುಗಾಲನ್ನಿಟ್ಟವರು ಕರ್ನಾಟಕ ರಾಜ್ಯದ ಹಿರಿಯ ರಾಜಕೀಯ ನೇತಾರ ಶ್ರೀ ಸಿ.ಕೆ.ಜಾಫರ್ ಷರೀಫ್ ಅವರು. ಭಾರತದ ರೈಲ್ವೇ ಜಾಲವನ್ನು ನ್ಯಾರೊ, ಮೀಟರ್ ನಿಂದ ಬ್ರಾಡ್‌ಗೇಜ್‌ಗೆ ಎತ್ತರಿಸಿ, ವಿಸ್ತರಿಸಿ ಇಡೀ ದೇಶವು ಒಂದು ಜಾಲದಲ್ಲಿ ಒಳಗೊಳ್ಳುವಂತೆ ಮಾಡಿದ್ದಲ್ಲದೆ, ಭಾರತೀಯ ರೈಲ್ವೇಯ ಆದಾಯವನ್ನು ಹೆಚ್ಚುಮಾಡಿ, ಜನಸ್ನೇಹಿಯನ್ನಾಗಿ ಮಾಡಿದ ಕೀರ್ತಿ ಅವರದ್ದು. 1991 ರಿಂದ 1995ರವರೆಗೆ ಕೇಂದ್ರದ ರೈಲ್ವೇ ಸಚಿವರಾಗಿ ಶ್ರಮಿಸಿದ ಶ್ರೀ ಜಾಫರ್ ಷರೀಫ್ ರವರು ಬೆಂಗಳೂರಿಗೆ ರೈಲ್ವೇಯ ಗಾಲಿ ಮತ್ತು ಅಚ್ಚು ಕಾರ್ಖಾನೆಯನ್ನು ತರುವುದಕ್ಕೂ ಕಾರಣಕರ್ತರಾದರು.


03-11-1933 to 25-11-2018

ಚಳ್ಳಕೆರೆಯ ಸಾಮಾನ್ಯ ಕುಟುಂಬದಲ್ಲಿ ಜನಿಸಿದ ಶ್ರೀ ಸಿ.ಕೆ. ಜಾಫರ್ ಷರೀಫ್ ಅವರು 1960ರ ದಶಕದಲ್ಲಿ ರಾಜಕೀಯವನ್ನು ಪ್ರವೇಶಿಸಿದರು. 8 ಬಾರಿ ಲೋಕಸಭೆಗೆ ಆರಿಸಲ್ಪಟ್ಟ ಶ್ರೀ ಸಿ.ಕೆ. ಜಾಫರ್ ಷರೀಫ್ ಅವರು 1980 ರಿಂದ 84ರವರೆಗೆ ಕೇಂದ್ರದಲ್ಲಿ ರೈಲ್ವೇ ರಾಜ್ಯ ಸಚಿವರಾಗಿದ್ದರು. ಅದಲ್ಲದೆ, ಕೃಷಿ ಮತ್ತು ಇಂಧನ ಮುಂತಾದ ಪ್ರಮುಖ ಖಾತೆಗಳನ್ನು ನಿರ್ವಹಿಸಿದ್ದರು.

ಶ್ರೀ ಸಿ.ಕೆ. ಜಾಫರ್ ಷರೀಫ್ ಅವರು ತಮ್ಮ ಶ್ರಮ ಮತ್ತು ಶ್ರದ್ಧೆಯಿಂದ ಬದುಕಿನಲ್ಲಿ ಯಶಸ್ಸನ್ನು ಸಾಧಿಸಿದವರು. ಸಾರ್ವಜನಿಕ ಕ್ಷೇತ್ರದಲ್ಲಿ ಅವರು ಮರೆಯಲಾಗದ ಗುರುತುಗಳನ್ನು ಮೂಡಿಸಿದ್ದಾರೆ.



**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯು ಶ್ರೀ ಸಿ.ಕೆ.ಜಾಫರ್ ಷರೀಫ್ ಅವರ ನಿಧನಕ್ಕೆ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.**
**ಅವರ ಮರಣದಿಂದಾಗಿರುವ ಅಪಾರ ನಷ್ಟ ಮತ್ತು ನೋವನ್ನು ಭರಿಸುವ ಶಕ್ತಿಯನ್ನು ಸಿ.ಕೆ. ಜಾಫರ್ ಷರೀಫ್ ಅವರ ಕುಟುಂಬಕ್ಕೆ ಮತ್ತು ಕರ್ನಾಟಕದ ಜನತೆಗೆ ನೀಡಲೆಂದು ನಾವು ಪ್ರಾರ್ಥಿಸುತ್ತೇವೆ.**

**– ರಾಜ್ಯ ಕಾರ್ಯದರ್ಶಿ**



ಶ್ರದ್ಧಾಂಜಲಿ

# ಜನಪ್ರಿಯ ರಾಜಕೀಯ ನಾಯಕ ರೆಬೆಲ್‌ಸ್ಟಾರ್ ಮಂಡ್ಯದ ಗಂಡು

# ಶ್ರೀ ಅಂಬರೀಶ್

ಇತ್ತೀಚಿನ ದಿನಗಳಲ್ಲಿ ಕರ್ನಾಟಕದ ಕಲೆ ಮತ್ತು ರಾಜಕೀಯ ಜೀವನದಲ್ಲಿ ಗಾಢ ಪರಿಣಾಮವನ್ನು ಉಂಟುಮಾಡಿದವರಲ್ಲಿ ಶ್ರೀ ಅಂಬರೀಶ್ ಅವರು ಪ್ರಮುಖರು. ಸಿನಿಮಾಗಳಲ್ಲಿ ನಟರಾಗಿ ವೃತ್ತಿಜೀವನವನ್ನು ಆರಂಭಿಸಿದ ಶ್ರೀ ಅಂಬರೀಶ್ ನಂತರದ ದಿನಗಳಲ್ಲಿ ಜನಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಅತ್ಯಂತ ಜನಪ್ರಿಯ ಜನನಾಯಕರಾಗಿ ಹೊರಹೊಮ್ಮಿದರು.

1952ರ ಮೇ 29ರಂದು ಮಂಡ್ಯ ಜಿಲ್ಲೆಯ ದೊಡ್ಡರಸನಕೆರೆ ಗ್ರಾಮದಲ್ಲಿ ಶ್ರೀ ಹುಚ್ಚೇಗೌಡ ಮತ್ತು ಶ್ರೀಮತಿ ಪದ್ಮಮ್ಮ ದಂಪತಿಗಳ ಪುತ್ರನಾಗಿ ಜನಿಸಿದರು. ಇವರ ಅಜ್ಜ ಖ್ಯಾತ ಪಿಟೀಲು ವಿದ್ವಾನರಾದ ಶ್ರೀ ಟಿ. ಚೌಡಯ್ಯ ನವರು. 1972ರಲ್ಲಿ ಅಂತರರಾಷ್ಟ್ರೀಯ ಖ್ಯಾತಿಯ ನಿರ್ದೇಶಕರಾಗಿದ್ದ ಶ್ರೀ ಎಸ್.ಆರ್. ಪುಟ್ಟಣ್ಣ ಕಣಗಾಲ್‌ರವರ ಪ್ರಶಸ್ತಿ ವಿಜೇತ "ನಾಗರಹಾವು" ಚಿತ್ರದಲ್ಲಿ ಖಳನಾಯಕನಾಗಿ ಸಿನಿಮಾ ಜೀವನವನ್ನು ಆರಂಭಿಸಿದ ಶ್ರೀ ಅಂಬರೀಶ್ ನಂತರದ ದಿನಗಳಲ್ಲಿ ತಮ್ಮ ನಟನಾ ಚಾತುರ್ಯದಿಂದ ನಾಯಕನಟನಾಗಿ "ರೆಬೆಲ್‌ಸ್ಟಾರ್" ಎಂದು ಜನಪ್ರಿಯರಾದರು. ಅನೇಕ ರಾಜ್ಯಸರ್ಕಾರಗಳು, ಫಿಲಂಫೇರ್ ಪ್ರಶಸ್ತಿಗಳಲ್ಲದೆ, ಕರ್ನಾಟಕ ವಿಶ್ವವಿದ್ಯಾನಿಲಯದಿಂದ ಗೌರವ ಡಾಕ್ಟರೇಟ್ ಪದವಿಯನ್ನು ಪಡೆದಿದ್ದಾರೆ.



ಅಂಬರೀಶ್‌ರವರು 1994ರಲ್ಲಿ ರಾಜಕೀಯ ಚಟುವಟಿಕೆಗಳಲ್ಲಿ ತೊಡಗಿಕೊಂಡರು. 12, 13 ಮತ್ತು 14ನೇ ಲೋಕಸಭೆಗಳಲ್ಲಿ (1998-1999, 1999-2004, 2004-2009 ಅವಧಿಗಳಲ್ಲಿ) ಸದಸ್ಯರಾಗಿದ್ದರು. ಕೇಂದ್ರದಲ್ಲಿ ಮಾಹಿತಿ ಮತ್ತು ಪ್ರಸಾರ ರಾಜ್ಯ ಸಚಿವರಾಗಿ ಕೆಲಸ ಮಾಡಿದ ಶ್ರೀ ಅಂಬರೀಶ್ ಅವರು 2013 ರಿಂದ 2018 ರವರೆಗೆ ಕರ್ನಾಟಕ ವಿಧಾನಸಭೆಯ ಸದಸ್ಯರಾಗಿದ್ದರು ಮತ್ತು ರಾಜ್ಯ ಸಂಪುಟದಲ್ಲಿ ವಸತಿ ಸಚಿವರಾಗಿ ಕಾರ್ಯನಿರ್ವಹಿಸಿದರು. ಅವರ ನೇರ ಮತ್ತು ದಿಟ್ಟ ನುಡಿಗಳು ಕನ್ನಡಿಗರನ್ನು ಯಾವಾಗಲೂ ಎಚ್ಚರದಲ್ಲಿಟ್ಟಿರುತ್ತದೆ.

**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯು ಶ್ರೀ ಅಂಬರೀಶ್ ಅವರ ನಿಧನಕ್ಕೆ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ. ಅವರ ಮರಣದಿಂದಾಗಿರುವ ಅಪಾರ ನಷ್ಟ ಮತ್ತು ನೋವನ್ನು ಭರಿಸುವ ಶಕ್ತಿಯನ್ನು ಶ್ರೀ ಅಂಬರೀಶ್ ಅವರ ಕುಟುಂಬಕ್ಕೆ ಮತ್ತು ಕರ್ನಾಟಕದ ಜನತೆಗೆ ನೀಡಲೆಂದು ನಾವು ಪ್ರಾರ್ಥಿಸುತ್ತೇವೆ.**

**- ರಾಜ್ಯ ಕಾರ್ಯದರ್ಶಿ**

## GONE HOME



**Chi. Chandrakant,** Rover Scout & 1st Year P.U.C. Student and Chi.Yadukumar, II Year P.U.C. Student of B.B.M.P. Junior College, Kasturibanagar, Bengaluru were killed when a speeding B.M.T.C. Bus hit them and crashed into a footpath on Mysuru Road Tollgate near Gopalan Mall on 18th December 2018.

Chi. Chandrakant hails from a poor family of Mallahatti Village, Chitapur Taluk, Kalaburagi District. He leaves behind his mother and relatives.



**Chi. Yadukumar** hails from a poor family of Ramanagara. He leaves behind his father, mother and relatives.

Smt. Gangambike Mallikarjun, Hon'ble Mayor of Bengaluru, visited Victoria Hospital where the bodie were kept and announced a compensation of Rs.10 Lakhs each to the families of the deceased. Sri M.Shivaraj, Ruling Pary Leader, B.B.M.P., Sri S.G.Raveendra, Special Commissioner (Education) & District Chief Commissioner, BBMP. District, Smt. K.R.Pallavi, Assistant Commissioner (Education) and District Secretary, Sri Harishkumar, Education Officer & Senior Police Officers were present.

Sri M.A. Chellaiah, Nodel Officer, BBMP District, Sri Muniswamappa, Subject Inspector, Smt. Sujatha, D.C. Ramesh, Corporator, Sri Jayaram Shetty, Principal, Local Leaders, Students, Teachers, Public, Police Officers paid their last respect to the departed Souls at the College Premises.

Sri P.G.R.Sindhia, State Chief Commissioner, BS&G, Karnataka has condoled the sudden death of Chi. Chandrakant and Chi. Yadukumar.

We Pray God Almighty to give necessary Courage and Strength to the family members to bear this irreparable loss. MAY THEIR SOUL REST IN PEACE

**- State Secretary**

# ಟಿಪ್ಸ್ (ಭಕ್ಷೀಸು)
## ಬಿ.ಪಿ ಅಭಿಪ್ರಾಯ



**ಎಂ. ಎನ್. ಷಡಕ್ಷರಿ**
ಜಿಲ್ಲಾ ಮುಖ್ಯ ಆಯುಕ್ತರು, ಚಿಕ್ಕಮಗಳೂರು

"ಇಂದಿನ ಅತ್ಯಂತ ಕೆಟ್ಟ ಅನಿಷ್ಟಗಳು" ಎನ್ನುವ ಬಗ್ಗೆ ಪತ್ರಿಕೆಗಳಲ್ಲಿ ಮತ್ತು ಅಭಿಪ್ರಾಯಗಳ ಬಗ್ಗೆ ನನ್ನ ಸಂಪೂರ್ಣ ಅಭಿಮತವಿದೆ. ಅವೆಲ್ಲವನ್ನೂ ಅವಲೋಕಿಸಿದಾಗ ಇಂದಿನ ಸಮಾಜವನ್ನು ಪೀಡಿಸುತ್ತಿರುವ ಮತ್ತೊಂದು ಅನಿಷ್ಟದ ಬಗ್ಗೆ ಪ್ರಸ್ತಾಪವಿಲ್ಲದಿರುವುದು ಕಂಡು ಬಂದಿತು. ಟಿಪ್ಸ್ (ಭಕ್ಷೀಸು) ನೀಡುವುದು ಯಾವ ದೃಷ್ಟಿಯಿಂದ ನೋಡಿದರೂ ತಪ್ಪೆ. ನಾನು ಯವಾಗಲೂ ಕರುಣೆ ಮತ್ತು ದಯೆಯ ಬಗ್ಗೆ ಪ್ರಸ್ತಾಪಿಸಿದ್ದೇನೆ. ಆದರೆ ಭಕ್ಷೀಸು ನೀಡುವುದು ಇದಕ್ಕೆ ವ್ಯತಿರಿಕ್ತವಾದದು. ಇದು ನೀಡುವವನಿಗೆ ಮತ್ತು ಸ್ವೀಕರಿಸುವವನಿಗೆ ಇಬ್ಬರಿಗೂ ಕೆಟ್ಟದು. (ವಿ.ಸೂ: ನಾನು ಹೇಳುತ್ತಿರುವುದು ಸಣ್ಣ ಸಣ್ಣ ಸೇವೆಗಳಿಗೆ ನೀಡುವ ಭಕ್ಷೀಸು, ಇದಕ್ಕಾಗಿ ಈಗಾಗಲೆ ತನ್ನ ಧಣಿಯಿಂದ ಸಂಬಳಪಡೆದಿರುವ ನೌಕರನ ಬಗ್ಗೆ).

ಈ ಇಡೀ ಭಕ್ಷೀಸು ವ್ಯವಹಾರದಲ್ಲಿ ಒಂದು ರೀತಿಯ ಗೌಪ್ಯತೆ ಕಂಡು ಬರುವುದು, ಏಕೆಂದರೆ ಕೊಡುವ ಮತ್ತು ನೀಡುವ ಇಬ್ಬರಿಗೂ ಇದು ಅವಮಾನಕರವೇ. ಸಾಮಾನ್ಯವಾಗಿ ಇದು ಮಾಲೀಕನ ಬೆನ್ನ ಹಿಂದೆ ನಡೆಯುವ ವ್ಯವಹಾರ.

ಆದರೆ ಭಕ್ಷೀಸು ನೀಡುವುದರಿಂದ ಮತ್ತೊಬ್ಬನ ಸ್ವಾಭಿಮಾನಕ್ಕೆ ಧಕ್ಕೆಯುಂಟಾಗುತ್ತದೆ. ನೀಡುವವನು ಸ್ವೀಕರಿಸುವವನಿಗಿಂತ ಶ್ರೇಷ್ಠನೆನ್ನುವ ಭಾವನೆಯುಂಟಾಗುತ್ತದೆ. ಸ್ವೀಕರಿಸುವವನು ಪ್ರತಿಫಲಾಪೇಕ್ಷೆಯ ಕಾರಣ ಭಟ್ಟಂಗಿ ಅಥವಾ ಪರವಾಲಂಬಿಯಾಗುತ್ತಾನೆ.

ಒಂದುಬಾರಿ ನಾನು ಅರಬ್ಬನೊಬ್ಬನ ಸಂಗಡ ಶಿಕಾರಿಗೆ ಹೋದೆ. ಅವನು ತನ್ನೊಂದಿಗೆ ತಮಟೆ ಬಾರಿಸುವರನ್ನು ಕರೆತಂದಿದ್ದ. ಪ್ರಯಾಸಕರ ದಿನದ ನಂತರ ಎಲ್ಲರೂ ಕೂಡಿ ನನ್ನ ಬಳಿ ಬಂದರು. ಅವರು ಭಕ್ಷೀಸಿಗೊಸ್ಕರ ಬಂದಿರಬಹುದು ಮತ್ತು ಎಷ್ಟು ನೀಡಿದರೆ ಸೂಕ್ತ ಎನ್ನುವ ಗೊಂದಲದಲ್ಲಿ ನಾನಿದ್ದೆ. ಆಶ್ಚರ್ಯವೆಂದರೆ ಅವರು ಕೇವಲ ನನ್ನ ಹಸ್ತಲಾಘವಮಾಡಿ ಆ ಸಂತೋಷಕರ ದಿನಕ್ಕಾಗಿ ನನಗೆ ಅಭಿನಂದಿಸಲು ಬಂದಿದ್ದರು! ನಾವು ಸಮಾನರಂತೆ ಒಬ್ಬರನ್ನೊಬ್ಬರು ಬೀಳ್ಕೊಟ್ಟೆವು.

ದುರದೃಷ್ಟವಶಾತ್ ನಮ್ಮ ದೇಶದಲ್ಲಿ (ಇಂಗ್ಲೆಂಡ್) ಈ ಪರಿಸ್ಥಿತಿ ಭಿನ್ನವಾಗಿದೆ. ಇಡೀ ದಿನದ ಬೇಟೆಯಾದ ಮೇಲೆ ಹಸ್ತಲಾಘವ ಮಾಡಿ ಒಬ್ಬರಿಗೊಬ್ಬರು ಸುಸಂಸ್ಕೃತರಂತೆ ಬೀಳ್ಕೊಡುತ್ತಿದ್ದುದು ಜ್ಞಾಪಕವಿದೆ ಆದರೆ ಇತ್ತೀಚೆಗೆ ಯಾವುದೋ ನಿರೀಕ್ಷೆಯಿಂದ ಸೇವಕರಂತೆ ವರ್ತಿಸುವುದನ್ನು ಕಂಡು ನನಗೆ ನೋವಾಗುತ್ತದೆ.

ಕೆಲವು ಸಾರಿ ಅನ್ನಿಸುತ್ತದೆ, ಯಾರಾದರೂ ಈ ಕೆಳಗಿನ ರೀತಿಯಲ್ಲಿ ಒಂದು ಪೋಸ್ಟ್ ಕಾರ್ಡ್ ವಿನ್ಯಾಸಮಾಡಿದರೆ ಒಳ್ಳೆಯದೇನೊ ಅಂತ.

ಇತೀಚೆಗೆ ಈ ವಿಷಯದ ಬಗ್ಗೆ ಬರೆಯುತ್ತಾ ಹರ್ಬಟ್ ಫೇನ್, "ಭಕ್ಷೀಸು ನೀಡುವುದು ಒಂದು ರೀತಿಯ ತೋರಿಕೆ ಹಾಗೂ ಗಂಡಸರೆ ಹೆಚ್ಚಾಗಿ ಟಿಪ್ಸ್ ನೀಡುತ್ತಾರೆ" ಎನ್ನುತ್ತಾನೆ.

"ಗಂಡಸರು ತಮ್ಮ ಘನತೆಗಾಗಿ ತಮ್ಮ ಕೊನೆಯ ಶಿಲ್ಲಿಂಗನ್ನಾದರು ನೀಡುತ್ತಾರೆ ಆದರೆ ಹೆಂಗಸರು ಇದಕ್ಕೆ ವ್ಯತಿರಿಕ್ತ". ತನ್ನನ್ನು ಎಲ್ಲಿ ಜಿಪುಣ ಎಂದುಕೊಳ್ಳುತ್ತಾರೊ ಎಂದು ಗಂಡಸರು ಸ್ವಲ್ಪ ಧಾರಾಳವಾಗಿ ಕೊಡುತ್ತಾರೆ. ಸಣ್ಣ ವಿಷಯಗಳಲ್ಲಿ ಅಪ್ರಾಮಾಣಿಕತೆ ಪ್ರಮುಖ ವಿಷಯಗಳಲ್ಲಿ ಭ್ರಷ್ಟತೆಗೆ ಎಡೆಮಾಡುವುದರಲ್ಲಿ ಸಂಶಯವಿಲ್ಲ. ಪುರಸಭೆಗಳ ಕಛೇರಿಗಳಲ್ಲಿ ಈ

ಭ್ರಷ್ಟತೆಯನ್ನು ವ್ಯಾಪಕವಾಗಿ ಕಾಣಬಹುದು. ಭಕ್ಷೀಸಿನಿಂದ ಕಾಣಿಕೆ, ಕಾಣಿಕೆಯಿಂದ ಲಂಚ ಮತ್ತು ಲಂಚದಿಂದ ಭ್ರಷ್ಟತೆಯ ಕಡೆಗೆ ಜಾರುವುದನ್ನು ರಾಜಕೀಯ ಮತ್ತು ಸರ್ಕಾರಿ ಕಛೇರಿಗಳಲ್ಲಿ ಕಾಣುತ್ತೇವೆ. ಭ್ರಷ್ಟತೆ ತಳವೂರಿದರೆ ಅದು ದೇಶದ ನಾಶದ ಕಡೆಗೆ ಮೊದಲ ಹೆಜ್ಜೆ.

ಅಧಿಕಾರದಲ್ಲಿರುವ ಮಹಿಳೆಯರು ಗಂಡಸರಿಗಿಂತ ಕಡಿಮೆ ಭ್ರಷ್ಟರೆಂದು ಹೇಳುವುದು ಕಷ್ಟ. ಮಹಿಳೆಯೊಬ್ಬಳು ಮೇಯರ್ ಆಗಿದ್ದ ದೇಶವೊಂದರಲ್ಲಿ ಪತ್ರಿಕೆಯ ಸುದ್ಧಿಯೊಂದು ಈ ರೀತಿ ಇತ್ತು. "ಸಾರ್ವಜನಿಕ ಸೇವೆಯಲ್ಲಿರುವ ನಮ್ಮ ನಾಯಕರುಗಳು ಎಲ್ಲಿರುವರು ಮತ್ತು ಏನು ಮಾಡುತ್ತಿರುವರು ಎಂದು ತಿಳಿಯುವುದು ಒಳ್ಳೆಯದು. ಕೊನೆಯ ನಗರಸಭಾ ಸದಸ್ಯನೂ ಕೂಡ ಕಾರಾಗೃಹದಲ್ಲಿದ್ದಾನೆ. ಅವನಿಗೆ ಬೇಜಾರುಕಳೆಯಲು ಎಲ್ಲಾ ಸಹ ಸದಸ್ಯರು, ಮೇಯರ್, ಪೊಲೀಸ್ ಮುಖ್ಯಸ್ಥ ಎಲ್ಲರೂ ಅವನೊಂದಿಗಿದ್ದಾರೆ- ಲಂಚದ ಆರೋಪದ ಮೇಲೆ".

ನೀವು ಮತ್ತು ನಾನು ಅತ್ಯಂತ ಸಾಮಾನ್ಯರು. ಆದರೆ ಮನಸ್ಸು ಮಾಡಿದರೆ ಸಾಕಷ್ಟು ದೇಶದ ಸೇವೆ ಮಾಡಲು ಶಕ್ತರು. ಭಕ್ಷೀಸು ಸ್ವೀಕರಿಸುವ ಸ್ಥಾನದಲ್ಲಿರುವ ನಾವು, ನಮ್ಮ ಸ್ವಾಭಿಮಾನವನ್ನು ಒತ್ತೆಯಿಡುತ್ತಿಲ್ಲವೇ ಎಂದು ಯೋಚಿಸುವ ಅವಶ್ಯಕತೆಯಿದೆ. ಚಿಲ್ಲರೆ ಹಣಕ್ಕಾಗಿ ನಮ್ಮ ಸ್ವಾಭಿಮಾನವನ್ನು ಒತ್ತೆಯಿಡುವುದರ ಬದಲು, ನಮ್ರವಾಗಿ ತಿರಸ್ಕರಿಸಬಹುದಲ್ಲವೇ?


*Which ought to feel the smaller?*

ಹಿಂದೆ, ಒಬ್ಬ ವೀರನ ದೀಕ್ಷೆ ನೀಡುವಾಗ, ರಾಜನು ಅವನ ನೆತ್ತಿಯ ಮೇಲೆ ಒಂದು ಪೆಟ್ಟು ಕೊಡುತ್ತಿದ್ದ, ಏಕೆಂದರೆ ಅವನ ದೇಹದ ಅತ್ಯಂತ ದುರ್ಬಲ ಸ್ಥಳವ್ಯಾವುದೆಂದು ನೆನಪಿಸಲು. "ಅದರ ರಕ್ಷಣೆ ನಿನ್ನ ಘನತೆಯ ರಕ್ಷಣೆ" ಎಂದು ಮನದಟ್ಟು ಮಾಡಲು. ರೋವರ್‌ಗಳ ದಿಕ್ಷಾ ಸಮಾರಂಭದಲ್ಲಿ ಇದನ್ನು ಅಳವಡಿಸಿಕೊಳ್ಳಲಾಗಿದೆ.

ಭಾರತದ ಅಧಿಕಾರಿವರ್ಗಕ್ಕೆ ಲಂಚಕೊಡಲು ಬಂದವರನ್ನು ಕ್ರೂರವಾಗಿ ಶಿಕ್ಷಿಸುತ್ತಿದ್ದುದನ್ನು ನಾವು ಕೇಳಿದ್ದೇವೆ. ಇದು ಅವರ ಸ್ವಾಭಿಮಾನವನ್ನು ಕೆಣಕಿದಂತಾಗುತ್ತಿತ್ತೇ ವಿನಹ, ಹಣ ಕಡಿಮೆ ಎಂದಲ್ಲ!

ಹಣ ಸುಲಿಗೆ ಮಾಡುವ ಭಕ್ಷೀಸು ಎನ್ನುವ ಈ ಅನಿಷ್ಟದಿಂದ ದೂರವಿರುವುದು ನಮ್ಮ ಜೇಬಿಗಾಗಿ ಅಲ್ಲದಿದ್ದರೂ, ಮತ್ತೊಬ್ಬರ ಗೌರವ ಕಾಪಾಡುವುದಕ್ಕೆ ಮತ್ತು ಅದು ಕ್ರಮೇಣ ಲಂಚಕ್ಕೆ ಎಡೆ ಗೊಡಬಾರದೆಂದು. ಇಲ್ಲದಿದ್ದರೆ, ಸಿಕ್ಕ ಸಿಕ್ಕವರಿಗೆಲ್ಲಾ ನಾಣ್ಯಕೊಟ್ಟು ಬಿಕ್ಷುಕರನ್ನು ನಿರ್ಮಾಣ ಮಾಡುವ ಮುಗ್ಧ ಮಹಿಳೆಯರ ಗುಂಪಿಗೆ ನಾವೂ ಸೇರುತ್ತೇವೆ. ಭವಿಷ್ಯದ ಪ್ರಜೆಗಳಿಗೆ ಭಕ್ಷೀಸು ಸ್ವೀಕರಿಸುವುದು ತಮ್ಮ ಸ್ವಾಭಿಮಾನ ಮತ್ತು ಘನತೆಯನ್ನು ಒತ್ತೆ ಇಟ್ಟಂತೆ ಎನ್ನುವುದನ್ನು ಮನವರಿಕೆ ಮಾಡಿಕೊಡುವ ಅವಶ್ಯಕತೆಯಿದೆ.

ನಾವು ಯಜಮಾನರಾಗಿದ್ದಲ್ಲಿ, ನೌಕರರಿಗೆ ಸಮಂಜಸ ಸಂಭಾವನೆ ನೀಡುವುದರ ಮೂಲಕ ಅವರು ಭಕ್ಷೀಸಿಗೆ ಆಸೆ ಪಡುವುದನ್ನು ಆದಷ್ಟು ಮಟ್ಟಿಗೆ ತಡೆಯಬಹುದು. ಈ ಪಿಡುಗನ್ನು ಸಂಪೂರ್ಣ ನಿರ್ಮೂಲನ ಮಾಡಿದರೆ ಮಾತ್ರ ಎಲ್ಲರೂ ಸಮಾನರು ಮತ್ತು ಎಲ್ಲರೂ ಗೌರವಕ್ಕೆ ಅರ್ಹರೆಂದು ಸಮರ್ಥಿಸುವುದಲ್ಲದೆ, ಇದು ವಿಶ್ವಭ್ರಾತೃತ್ವದೆಡೆಗೆ ಒಂದು ದಿಟ್ಟ ಹೆಜ್ಜೆ ಎಂದು ಹೇಳಬಹುದು.

ಬಿ.ಪಿ. ಯವರ

**LIFE'S SANGS**
ಎನ್ನುವ ಕೃತಿಯ ಆಯ್ದಭಾಗ

# ರೇಂಜರಿಂಗ್‌ನ ಉಗಮ ಮತ್ತು ಬೆಳವಣಿಗೆ

ಬಿ.ವಿ. ರಾಮಲತಾ
ಜಂಟಿ ರಾಜ್ಯ ಕಾರ್ಯದರ್ಶಿ
ಭಾರತ್, ಸ್ಕೌಟ್ಸ್ & ಗೈಡ್ಸ್, ಕರ್ನಾಟಕ

ಇದೇ ತಾನೆ ನಾವೆಲ್ಲರೂ ಮುದ್ದೇನಹಳ್ಳಿಯಲ್ಲಿ ನಡೆದ ರೋವರಿಂಗ್ ಶತಮಾನೋತ್ಸವದ ಮುಕ್ತಾಯ ಸಮಾರಂಭದಲ್ಲಿ ಪಾಲ್ಗೊಂಡಿದ್ದೆವು. ಆದರೆ ರೇಂಜರಿಂಗ್ ಶತಮಾನೋತ್ಸವ ಎಂದು? ರೇಂಜರಿಂಗ್ ಹೇಗೆ ಪ್ರಾರಂಭವಾಯಿತು? ಎನ್ನುವ ಪ್ರಶ್ನೆ ನಮ್ಮಲ್ಲಿ ಮೂಡುವುದು ಸಹಜ.

ಸ್ಕೌಟ್ ಚಳವಳಿಯು ಲಾರ್ಡ್ ಬೇಡನ್ ಪಾವೆಲ್‌ರವರಿಂದ 1907ರಲ್ಲಿ ಅವರು ನಡೆಸಿದ ಪ್ರಾಯೋಗಿಕ ಶಿಬಿರದಿಂದ ಪ್ರಾರಂಭವಾಯಿತು. ನಂತರ ಅವರು ಬರೆದ "ಸ್ಕೌಟಿಂಗ್ ಫಾರ್ ಬಾಯ್ಸ್" ಪುಸ್ತಕದಿಂದ ಚಳವಳಿಗೆ ಉತ್ತಮ ಪ್ರಚಾರ ಲಭಿಸಿ, ಸ್ಕೌಟಿಂಗ್ ವಿಶ್ವದಾದ್ಯಂತ ಹರಡಿತು. ಬಿ.ಪಿ.ರವರು ಸ್ಕೌಟ್‌ಗಳ ಸಂಖ್ಯೆ ಎಷ್ಟಿದೆ ಎಂಬುದನ್ನು ಅರಿಯಲು ಸೆಪ್ಟೆಂಬರ್ 1909ರಲ್ಲಿ ಲಂಡನ್‌ನ ಕ್ರಿಸ್ಟಲ್ ಪ್ಯಾಲೆಸ್‌ನಲ್ಲಿ ಏರ್ಪಡಿಸಿದ್ದ ರ್‍ಯಾಲಿಯಲ್ಲಿ 11000 ಸ್ಕೌಟ್‌ಗಳು ಸೇರಿದ್ದರು. ಇಲ್ಲಿ ನಡೆದ, ಬಿ.ಪಿ.ರವರು ಊಹಿಸಲಾಗದ ಘಟನೆ ಎಂದರೆ . . . ಏಳು ಹೆಣ್ಣು ಮಕ್ಕಳು ಸ್ಕೌಟ್‌ಗಳಂತೆಯೇ ಸಮವಸ್ತ್ರ ಧರಿಸಿ "ನಾವು ವುಲ್ಫ್ ಪೆಟ್ರೋಲ್‌ನ ಗರ್ಲ್ ಸ್ಕೌಟ್ಸ್" ಎಂದು ಘೋಷಿಸಿದ್ದು. ಬಿ.ಪಿ.ರವರು ಸ್ಕೌಟ್ಸ್ ಕಾರ್ಯಕ್ರಮವನ್ನು ಹೆಣ್ಣು ಮಕ್ಕಳಿಗಾಗಿ ರಚಿಸಿರಲಿಲ್ಲ. ಆದ್ದರಿಂದ ಅವರು ಆ ಹೆಣ್ಣುಮಕ್ಕಳಿಗೆ "ಈ ಕಾರ್ಯಕ್ರಮ ನಿಮಗಲ್ಲ" ಎಂದು ಎಷ್ಟು ಹೇಳಿದರೂ ಕೇಳದಿದ್ದಾಗ ಬಿ.ಪಿ.ರವರು ಹೆಣ್ಣು ಮಕ್ಕಳಿಗಾಗಿ ಸ್ಕೌಟಿಂಗ್ ಅನ್ನು ಪ್ರಾರಂಭಿಸಲೇ ಬೇಕಾಯಿತು. ಗರ್ಲ್ ಸ್ಕೌಟ್ಸ್‌ಗಳು ಗಂಡುಮಕ್ಕಳಂತೆ ಕಾಡುಬೆಕ್ಕು, ತೋಳ, ಸಿಂಹ ಮುಂತಾದ ಹೆಸರುಗಳನ್ನು ತಮ್ಮ ಅಷ್ಟಕಕ್ಕೆ ಇಟ್ಟುಕೊಂಡಿರುವುದು ಬಿ.ಪಿ.ರವರಿಗೆ ಸಮಾಧಾನಕರವಾಗಿರಲಿಲ್ಲ. ಬಾಲಕಿಯರ ವಿಭಾಗಕ್ಕೆ ಅವರು ಒಂದು ಒಳ್ಳೆಯ ಹೆಸರನ್ನು ಹುಡುಕತೊಡಗಿದರು. ಆಗ ಅವರಿಗೆ 1887ರಲ್ಲಿ ತಮ್ಮೊಡನೆ ಕೆಲಸ ಮಾಡಿದ ಭಾರತದ ಉತ್ತರ-ಪಶ್ಚಿಮಗಡಿ ಕಾವಲ ಸೈನ್ಯದ "ಗೈಡ್ಸ್" ಎಂಬ ಹೆಸರಿನ ತುಕಡಿಯ ಕಾವಲುಗಾರರು ನೆನಪಿಗೆ ಬಂದರು. ಅವರ ಧೈರ್ಯ, ಸಾಹಸ, ಮನೋಬಲ, ಯುದ್ಧಕುಶಲತೆಯ ಉತ್ತಮ ಸಾಮರ್ಥ್ಯ ಹಾಗೂ ಪ್ರಾಮಾಣಿಕತೆ, ದೇಶಭಕ್ತಿ, ದೇವರಲ್ಲಿ ನಂಬಿಕೆ ಮುಂತಾದ ಗುಣಗಳನ್ನು ಬಹಳವಾಗಿ ಮೆಚ್ಚಿದ್ದರು. ಜೊತೆಗೆ ಸ್ವಿರ್ಜಲ್ಯಾಂಡಿನ ಬೆಟ್ಟದಲ್ಲಿ ಪರ್ವತ ಸಂಚಾರಿಗಳಿಗೆ ಮಾರ್ಗದರ್ಶನ ನೀಡುತ್ತಿದ್ದ ಸಾಹಸಿ, ಪ್ರಾಮಾಣಿಕ ಮಾರ್ಗದರ್ಶಕರಾದ ಗೈಡ್‌ಗಳು ನೆನಪಿಗೆ ಬಂದರು. ನಮ್ಮ ಹೆಣ್ಣುಮಕ್ಕಳೂ ಇವರಂತೆ ಮುಂದೆ ಬೆಳೆದು ಕುಟುಂಬಗಳನ್ನು ಮುನ್ನಡೆಸುವ, ರಕ್ಷಿಸುವ ಸಮರ್ಥ ಮಾತೆಯರಾಗುವವರು ಅಲ್ಲವೇ, ಎಂದು ಯೋಚಿಸಿ, ಬಾಲಕಿಯರ ವಿಭಾಗಕ್ಕೆ "ಗರ್ಲ್ ಗೈಡ್" ಎಂದು ಹೆಸರಿಸಿ ಅದರ ನಾಯಕತ್ವವನ್ನು ಸಹೋದರಿ ಆಗ್ನೇಸ್ ಬೇಡನ್ ಪಾವೆಲ್‌ರವರಿಗೆ ವಹಿಸಿದರು.



ಹೀಗೆ 1909ರಲ್ಲಿ ಪ್ರಾರಂಭವಾದ ಗೈಡಿಂಗ್ ಎಲ್ಲೆಡೆ ಹರಡಿ ಎಲ್ಲಾ ವಯಸ್ಸಿನ ಹೆಣ್ಣು ಮಕ್ಕಳು ಗೈಡಿಂಗ್‌ನಲ್ಲಿ ಆಸಕ್ತಿ ಹುಟ್ಟಿ, ಸೇರಲು ಕಾತುರರಾದರು.

1916ರ ವೇಳೆಗೆ 1909ರಲ್ಲಿ ಗೈಡಿಂಗ್ ಸೇರಿದ ಹೆಣ್ಣು ಮಕ್ಕಳಿಗೆ 'ತಾವು ಹಿರಿಯರು' ಚಿಕ್ಕ ಹೆಣ್ಣುಮಕ್ಕಳೊಂದಿಗೆ ಕಲಿಯುವುದು, ಕೆಲಸ ಮಾಡುವುದು, ರುಚಿಸಲಿಲ್ಲ. ಹಾಗೆಯೇ ಗೈಡಿಂಗ್‌ಗೆ ಸೇರಬೇಕೆಂಬ ಯುವತಿಯರಿಗೂ ಸಹ ಚಿಕ್ಕ ಹುಡುಗಿಯರೊಂದಿಗೆ ಸೇರಿ ಕಲಿಯಲು ಮುಜುಗರವೆನಿಸುತ್ತಿತ್ತು. ಆದ್ದರಿಂದ ಈ ಹಿರಿಯ ಗೈಡ್‌ಗಳಿಗಾಗಿ ಪ್ರತ್ಯೇಕ ವಿಭಾಗವನ್ನು ಅದಕ್ಕೆ ಸರಿಹೊಂದುವ ಬೋಧನಾ ವಿಷಯಗಳನ್ನು ರಚಿಸುವುದು ಅನಿವಾರ್ಯ ಎಂದು ಮನಗಂಡ ಬಿ.ಪಿ.ರವರು ಶ್ರೀಮತಿ ಮಾರ್ಕ್ ಕೆರ್ (**Mark kerr**) ರವರಿಗೆ ಈ ಹಿರಿಯ ಗೈಡ್‌ಗಳ ವಿಭಾಗವನ್ನು ವಹಿಸಿ ಅವರಿಗೆ ಸರಿಹೊಂದುವ ಪಠ್ಯಕ್ರಮ ಹಾಗೂ ಯೋಜನೆಯನ್ನು ತಯಾರಿಸಲು ವಿನಂತಿಸಿದರು.

ಈ ಹಿರಿಯ ಗೈಡ್‌ಗಳ ಯೋಜನೆ ಮುಂದಿನ ಗೆಜೆಟ್‌ಗಳಲ್ಲಿ ಪ್ರಕಟವಾಯಿತು. 1918ರಲ್ಲಿ ಹೊಸ ದಳಗಳು ಪ್ರಾರಂಭವಾದವು. ಈ ಹಿರಿಯ ಗೈಡ್‌ಗಳ ವಿಭಾಗಕ್ಕೆ ಸೂಕ್ತ ಹೆಸರು ಸೂಚಿಸುವುದೂ ಮುಖ್ಯವಾಗಿತ್ತು. 1919ರ ಗೆಜೆಟ್‌ನಲ್ಲಿ "ಸಿಟಿಜನ್‌ಗೈಡ್ಸ್", "ಪ್ರಯೊನೀರ್ಸ್", "ಪೈಲಟ್ಸ್", "ಟಾರ್ಚ್‌ಬೇರರ್ಸ್", "ಗೈಡ್‌ವುಮೆನ್", "ರೇಂಜರ್ ಹಾರ್ಟ್ಸ್" ಮುಂತಾದ ಹೆಸರುಗಳು ಸೂಚಿಸಲ್ಪಟ್ಟವು. ಆದರೆ, ಈ ಹೆಸರುಗಳಿಗೆ ಒಮ್ಮತವಾದ ಒಪ್ಪಿಗೆ ಬರಲಿಲ್ಲ. 1920ರಲ್ಲಿ ನಡೆದ ಆಕ್ಸ್‌ಫರ್ಡ್ ಸಮ್ಮೇಳನದಲ್ಲಿ "ಚೀಫ್ ಸ್ಕೌಟ್ ಬಿ.ಪಿ.ರವರು ಸೂಚಿಸಿದ ರೇಂಜರ್ಸ್ ಎಂಬ ಹೆಸರನ್ನು ಚೀಫ್ ಗೈಡ್ ಆಲೇವ್ ಬಿ.ಪಿ.ರವರು ಸೂಚಿಸಿ ಜೂನ್1920ರ ಗೆಜೆಟ್‌ನಲ್ಲಿ ಪ್ರಕಟವಾಯಿತು.

ರೇಂಜರ್ ಎಂದರೆ . . .

1. ಈ ವರೆಗೆ ಗೈಡ್ ಆಗಿ ಕ್ರಮಿಸದ ಹಾದಿಯಲ್ಲಿ, ಸರಿಯಾದ ಕ್ರಮದಲ್ಲಿ ಕ್ರಮಿಸುವಳು.

2. ವಿಶಾಲ ಮನೋಭಾವವುಳ್ಳ, ಜವಾಬ್ದಾರಿಯುಳ್ಳ, ರಕ್ಷಣಾಭಾಧ್ಯತೆಯುಳ್ಳ ವ್ಯಕ್ತಿ

3. ಸಮಾನಾಂತರ ದಿಕ್ಕಿನಲ್ಲಿ ಪಯಣಿಸುವವಳು ಅಂದರೆ ರೇಂಜರ್ ಅಥವಾ ಹಿರಿಯ ಗೈಡ್‌ಗಳು ರೋವರ್‌ಗಳೊಂದಿಗೆ ಅವರ ಭಾಧ್ಯತೆಗಳಿಗೆ ಪೂರಕವಾಗಿ ಕೆಲಸಮಾಡುವವಳು

ರೇಂಜರ್ ವಿಭಾಗದ ಭಾದ್ಯತೆಹೊತ್ತ ಮೆ॥ ಮಾರ್ಕ್ ಕೆರ್ರ್ ಗೈಡ್‌ಗಳ ಅನೇಕ 'ಸಾಹಸ ಚಟುವಟಿಕೆಗಳ' **(Venture)** ನಾಯಕಿಯಾಗಿದ್ದರು. ಒಳ್ಳೆಯ ಬರಹಗಾರ್ತಿ, ನಂಬಿಕಸ್ಥೆ, ನಿಷ್ಠಾವಂತೆ ಮತ್ತು ಗೈಡ್ಸ್ ಸಂಸ್ಥೆಯ ಬೆಂಬಲಿಗರಾಗಿದ್ದರು.

ರೇಂಜರ್-ಗೈಡರ್‌ಗಳ ಮೊದಲನೇ ಸಮ್ಮೇಳನ ಹಿಂಡ್‌ಹೆಡ್ **(Hind head) Easter** 1922ರಲ್ಲಿ ನಡೆಯಿತು. ಈ ಸಮ್ಮೇಳನದಲ್ಲಿ 30 ಗೈಡರ್‌ಗಳು ಭಾಗವಹಿಸಿ ಆಲೋಚನೆಗಳನ್ನು ಪರಸ್ಪರ ವಿನಿಮಯ ಮಾಡಿಕೊಂಡರು. 1927ರಲ್ಲಿ ರೇಂಜರ್‌ಗಳೊಂದಿಗೆ ಸೀಗೈಡ್ಸ್ ಮತ್ತು ಕೆಡೆಟ್ಸ್ ಸಹ ಸೇರಿ ಒಂದೇ ವಿಭಾಗವನ್ನು ಮಾಡಲಾಯಿತು.

**ಭಾರತದಲ್ಲಿ ರೇಂಜರಿಂಗ್**:- ಭಾರತದಲ್ಲಿ ರೇಂಜರಿಂಗ್ ಯಾವಾಗ ಪ್ರಾರಂಭವಾಯಿತು ಎಂಬುದರ ಬಗ್ಗೆ ನಿಖರವಾದ ಮಾಹಿತಿ ಇಲ್ಲ. 1918ರಲ್ಲಿಯೇ ಪ್ರಾರಂಭವಾಯಿತು ಎಂದು ಕೆಲವು ದಾಖಲೆಗಳು ಸೂಚಿಸುತ್ತವೆ. ದೆಹಲಿಯಲ್ಲಿ 27 ರಿಂದ 30ನೇ ಸೆಪ್ಟೆಂಬರ್ 1964ರವರೆಗೆ ನಡೆದ ರಾಷ್ಟ್ರೀಯ ವಿಚಾರ ಗೋಷ್ಠಿಯಲ್ಲಿ ರೋವರ್-ರೇಂಜರ್‌ಗಳ ವಯೋಮಿತಿಯನ್ನು 18 ರಿಂದ 24 ವರ್ಷಗಳು ಎಂದು ನಿರ್ಧರಿಸಲಾಯಿತು ಎಂದು ತಿಳಿದುಬರುತ್ತದೆ.

ಮೊದಲನೇ ರೋವರ್ ಸ್ಕೌಟ್ ಮತ್ತು ರೇಂಜರ್ ಲೀಡರ್‌ಗಳ ಸಮ್ಮೇಳನವನ್ನು 29 ರಿಂದ 31 ಮಾರ್ಚ್ 1967ರಲ್ಲಿ ಪಶ್ಚಿಮ ರೈಲ್ವೇವಲಯ ತರಬೇತಿ ಕೇಂದ್ರ ಉದಯಪುರದಲ್ಲಿ ಹಮ್ಮಿಕೊಳ್ಳಲಾಗಿತ್ತು. ಮತ್ತು ಈ ಸಮ್ಮೇಳನವನ್ನು ಉದಯಪುರದ ಮಹಾರಾಜ ಭಾಗವತ್‌ಸಿಂಗ್‌ಜಿರವರು 29.03.1967ರಂದು ಉದ್ಘಾಟಿಸಿದರೆಂದು ತಿಳಿದುಬರುತ್ತದೆ. ಮಹಾತ್ಮಗಾಂಧೀಜಿರವರ ಶತಮಾನೋತ್ಸವ ವರ್ಷ 1969ರಲ್ಲಿ ಡಿಸೆಂಬರ್ 29ರಿಂದ ಜನವರಿ 6 1970ರ ವರೆಗೆ ರಾಷ್ಟ್ರೀಯ ತರಬೇತಿ ಕೇಂದ್ರ ಪಚಮರಿಯಲ್ಲಿ ನಡೆದ ಪ್ರಾದೇಶಿಕ 'ರೋವರ್-ರೇಂಜರ್ ಸಮಾಗಮ'ದಲ್ಲಿ 17 ರಾಜ್ಯಗಳಿಂದ 189 ರೋವರ್ಸ್ ಹಾಗೂ 63 ರೇಂಜರ್ಸ್ ಪಾಲ್ಗೊಂಡಿದ್ದರು. ವಿಶ್ವ ಸ್ಕೌಟ್ ಮತ್ತು ಗೈಡ್ ಸಂಸ್ಥೆಗಳಿಂದ ಗುರುತಿಸಲ್ಪಟ್ಟ ಈ ಸಮಾಗಮ್‌ನ ಧ್ಯೇಯವಾಕ್ಯ "ಸ್ನೇಹದಿಂದ ಶಾಂತಿ" ಆಗಿತ್ತು. ಶ್ರೀ ಜಯಪ್ರಕಾಶ್ ನಾರಾಯಣ್, ಶ್ರೀಮತಿ ಶೀಲಾಗೋರಿ ಮುಂತಾದ ಗಣ್ಯರು ಸಮಾಗಮ್‌ಗೆ ಭೇಟಿ ನೀಡಿ ರೋವರ್-ರೇಂಜರ್‌ಗಳನ್ನು ಉದ್ದೇಶಿಸಿ ಮಾತನಾಡಿದರು.

ಪ್ರಪ್ರಥಮ ರಾಷ್ಟ್ರಪತಿರೋವರ್ಸ್-ರೇಂಜರ್ಸ್ ಪ್ರಶಸ್ತಿ ರ್‍ಯಾಲಿಯನ್ನು 1971ರಲ್ಲಿ ನಿಜಾಮುದ್ದೀನ್‌ನಲ್ಲಿ ಹಮ್ಮಿಕೊಳ್ಳಲಾಗಿತ್ತು. 1972ರಲ್ಲಿ ಲಕ್ನೋ ಜಿಲ್ಲೆಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ರೇಂಜರಿಂಗ್‌ನ್ನು ಜನಪ್ರಿಯಗೊಳಿಸಲು 50 ಹಳ್ಳಿಗಳಿಂದ 6-6 ಮಹಿಳೆಯನ್ನು ಆರಿಸಿ ಪೌಷ್ಟಿಕತೆ, ಸಾರ್ವಜನಿಕ ಆರೋಗ್ಯ, ಕೃಷಿ, ಸಾಕ್ಷರತೆ, ಮುಂತಾದ ವಿಷಯಗಳಲ್ಲಿ ತರಬೇತಿ ನೀಡಲಾಯಿತು. ಹೀಗೆ ನಡೆದ 10 ದಿನಗಳ ತರಬೇತಿಗೆ ಡಾ॥ ಸಬರ್‌ವಾಲ್, ರಾಜ್ಯ ಆಯುಕ್ತರು (ಗೈಡ್) ಮೇಲ್ವಿಚಾರಕರಾಗಿದ್ದರು.

. . . **ಮುಂದುವರೆಯುತ್ತದೆ.**




# ನೋಂದಣಿ ಮತ್ತು ಮುದ್ರಾಂಕ ಇಲಾಖೆ



ಶ್ರೀ ಹೆಚ್.ಡಿ. ಕುಮಾರಸ್ವಾಮಿ
ಸನ್ಮಾನ್ಯ ಮುಖ್ಯಮಂತ್ರಿಗಳು



ಡಾ|| ಜಿ. ಪರಮೇಶ್ವರ
ಮಾನ್ಯ ಉಪ ಮುಖ್ಯಮಂತ್ರಿಗಳು



## ಎಲ್ಲಾ ಬಗೆಯ ನೋಂದಣಿಗೆ "ಕಾವೇರಿ ಆನ್‌ಲೈನ್ ಸೇವೆ"




ಮೌಲ್ಯ ಆಪ್ ಅನ್ನು ಗೂಗಲ್ ಮತ್ತು IOS ಆಪ್ ಸ್ಟೋರ್‌ನಲ್ಲಿ ಉಚಿತವಾಗಿ ಡೌನ್‌ಲೋಡ್ ಮಾಡಿಕೊಳ್ಳಿ

### ನೋಂದಣಿಗೆ ಸಂಬಂಧಿಸಿದಂತೆ ಜಾರಿ ಮಾಡಲಾಗುತ್ತಿರುವ ಆನ್‌ಲೈನ್ ಸೇವೆಗಳು

- **ಸ್ಥಿರಾಸ್ತಿಗಳ ಋಣಭಾರ ಪ್ರಮಾಣ ಪತ್ರ/ನೋಂದಾಯಿತ ದಸ್ತಾವೇಜುಗಳ ದೃಢೀಕೃತ ನಕಲು ಪ್ರತಿ ಪೂರೈಸುವಿಕೆ:**

ಸ್ಥಿರಾಸ್ತಿಗಳ ಋಣಭಾರ ಪ್ರಮಾಣ ಪತ್ರ ಮತ್ತು ನೋಂದಾಯಿತ ದಸ್ತಾವೇಜುಗಳ ದೃಢೀಕೃತ ನಕಲು ಪ್ರತಿಗಳನ್ನು ಆನ್‌ಲೈನ್ ಮುಖಾಂತರ ಪಡೆಯಬಹುದಾಗಿರುತ್ತದೆ. ಒಂದು ವೇಳೆ ನಿರ್ದಿಷ್ಟ ಆಸ್ತಿಗಳ ಕುರಿತು ಋಣಭಾರಗಳನ್ನು ಪರಿಶೀಲಿಸಬೇಕಾದಲ್ಲಿ ಆಸ್ತಿಯ ವಿವರವನ್ನು ನೀಡಿ ನೈಜ ಸಮಯದಲ್ಲಿ ವಿವರಗಳನ್ನು ಪಡೆಯಬಹುದಾಗಿರುತ್ತದೆ. ಡಿಜಿಟಲ್ ಸಹಿ ಮಾಡಿದ ಋಣಭಾರ ಪ್ರಮಾಣ ಪತ್ರಗಳನ್ನು ಸಾರ್ವಜನಿಕರು ಆನ್‌ಲೈನ್‌ನ ಮೂಲಕ ಸೂಕ್ತ ಶುಲ್ಕವನ್ನು ಪಾವತಿಸುವ ಮೂಲಕ ಪಡೆಯಬಹುದಾಗಿರುತ್ತದೆ.

ನೋಂದಾಯಿಸಿದ ದಸ್ತಾವೇಜಿನ ದೃಢೀಕೃತ ನಕಲನ್ನು ಪಡೆಯಲು ಸಾರ್ವಜನಿಕರು ಆನ್‌ಲೈನ್‌ನಲ್ಲಿ ದಸ್ತಾವೇಜು ನೋಂದಾಯಿಸಿದ ಉಪನೋಂದಣಿ ಕಛೇರಿಯ ಹೆಸರನ್ನು ಆಯ್ಕೆ ಮಾಡಿ ದಸ್ತಾವೇಜಿನ ಸಂಖ್ಯೆ ನಮೂದಿಸಿ ಸೂಕ್ತ ಶುಲ್ಕವನ್ನು ಆನ್‌ಲೈನ್ ಮೂಲಕ ಪಾವತಿಸಿ ಪಡೆಯಬಹುದಾಗಿರುತ್ತದೆ.

- **ಸ್ಥಿರಾಸ್ತಿಗಳ ಮೌಲ್ಯ ಮತ್ತು ಮುದ್ರಾಂಕಗಳ ಶುಲ್ಕಗಳ ಲೆಕ್ಕ ಹಾಕುವಿಕೆ:**

ಸಾರ್ವಜನಿಕರು ತಮ್ಮ ಆಸ್ತಿಯ ವಿವರಗಳನ್ನು ತಂತ್ರಾಂಶದಲ್ಲಿ ನಮೂದಿಸಿ, ಆಸ್ತಿಯ ಮಾರ್ಗಸೂಚಿ ಮೌಲ್ಯವನ್ನು ಸ್ವತಃ ಲೆಕ್ಕ ಮಾಡಬಹುದು ಹಾಗೂ ಪಾವತಿಸಬೇಕಾದ ಮುದ್ರಾಂಕ ಶುಲ್ಕವನ್ನು ಸರಳ ಮತ್ತು ಸುಲಭ ಹಂತಗಳಲ್ಲಿ ತಂತ್ರಾಂಶದಲ್ಲಿ ಲೆಕ್ಕ ಮಾಡಬಹುದಾಗಿರುತ್ತದೆ.

- **ಸಾರ್ವಜನಿಕರಿಂದ ನೋಂದಣಿ ಪೂರ್ವ ಡೇಟಾ ಎಂಟ್ರಿ:**

ಈ ಸೇವೆಯು ಸಾರ್ವಜನಿಕರಿಂದ ಉಪನೋಂದಣಿ ಕಛೇರಿಗೆ ಅನೇಕ ಬಾರಿ ಭೇಟಿ ನೀಡುವುದನ್ನು ತಪ್ಪಿಸಿ ಆನ್‌ಲೈನ್ ಮೂಲಕ ದಸ್ತಾವೇಜನ್ನು ನೋಂದಣಿಗೆ ಸಲ್ಲಿಸುವ ಅವಕಾಶ ಕಲ್ಪಿಸುತ್ತದೆ. ಸಾರ್ವಜನಿಕರು ನೋಂದಾಯಿಸಬೇಕಾದ ಆಸ್ತಿಯ ಎಲ್ಲಾ ವಿವರಗಳನ್ನು ನೋಂದಣಿ ಪೂರ್ವದಲ್ಲಿ ಆನ್‌ಲೈನ್ ಮೂಲಕ ನಮೂದಿಸಿಕೊಂಡು, ಮಾಹಿತಿಗಳನ್ನು ವೀಕ್ಷಿಸಿದ ನಂತರ ಅವಶ್ಯವಿದ್ದಲ್ಲಿ ಸರಿಪಡಿಸಿ ಸಂಬಂಧಪಟ್ಟ ದಾಖಲೆಗಳನ್ನು ಅಪ್‌ಲೋಡ್ ಮಾಡಿ ಆನ್‌ಲೈನ್‌ನಲ್ಲಿ ನೋಂದಣಿಗೆ ಅರ್ಜಿ ಸಲ್ಲಿಸಬಹುದಾಗಿರುತ್ತದೆ.

ನೋಂದಣಿ ಮತ್ತು ಮುದ್ರಾಂಕ ಇಲಾಖೆಯಿಂದ ನಿಗದಿಪಡಿಸಿದ ಆಸ್ತಿಯ ಮಾರ್ಗಸೂಚಿ ದರಗಳನ್ನು ತಂತ್ರಾಂಶದಲ್ಲಿ ಪಡೆದು, ದಸ್ತಾವೇಜಿಗೆ ಸಂಬಂಧಿಸಿದ ಆಸ್ತಿಯ ಮಾರುಕಟ್ಟೆ ಮೌಲ್ಯವನ್ನು ನಿರ್ಧರಿಸಿಕೊಳ್ಳಬಹುದು. ನಂತರ ನಿರ್ಧರಿಸಿದ ಮಾರುಕಟ್ಟೆ ಮೌಲ್ಯದ ಮಂಜೂರಾತಿಗಾಗಿ ಅರ್ಜಿಯನ್ನು ಉಪನೋಂದಣಾಧಿಕಾರಿಗಳಿಗೆ ಸಲ್ಲಿಸಬಹುದು.

- **ದಸ್ತಾವೇಜಿನ ನೋಂದಣಿಗೆ ಮುಂಗಡ ಕಾಲ ನಿಗದಿಪಡಿಸುವಿಕೆ (Appointment Booking):**

ಉಪನೋಂದಣಾಧಿಕಾರಿಗಳು ಸಾರ್ವಜನಿಕರಿಂದ ಆನ್‌ಲೈನ್ ಮೂಲಕ ಅರ್ಜಿ ಮತ್ತು ಮೌಲ್ಯವನ್ನು ಮಾನ್ಯಗೊಳಿಸಿದ ನಂತರ ದಸ್ತಾವೇಜಿಗೆ ತಗಲುವ ಶುಲ್ಕಗಳನ್ನು ಸಾರ್ವಜನಿಕರು ಪಾವತಿಸಲು ಸಿದ್ಧರಿದ್ದಲ್ಲಿ ಆನ್‌ಲೈನ್ ಮೂಲಕ ಪಾವತಿಸಿ, ಅವಕಾಶವಿದ್ದ ಮುಂದಿನ ದಿನಾಂಕಗಳಂದು ನೋಂದಣಿ ಪ್ರಕ್ರಿಯೆಗಾಗಿ ಮುಂಗಡವಾಗಿ ಕಾಲ ನಿಗದಿಪಡಿಸಿಕೊಳ್ಳಬಹುದಾಗಿರುತ್ತದೆ.

- **ಉಪನೋಂದಣಿ ಕಛೇರಿಯ ಗುರುತಿಸುವಿಕೆ:**

ರಾಜ್ಯದ ಎಲ್ಲಾ 250 ಉಪನೋಂದಣಿ ಕಛೇರಿಗಳ ವಿಳಾಸದ ಮಾಹಿತಿಯು ಆನ್‌ಲೈನ್ ಪೋರ್ಟಲ್‌ನಲ್ಲಿ ಲಭ್ಯವಿದ್ದು, ಸಂಬಂಧಿಸಿದ ಕಾರ್ಯ ವ್ಯಾಪ್ತಿಯ ಉಪನೋಂದಣಿ ಕಛೇರಿಯಲ್ಲಿ ವಿವರವನ್ನು ಸಾರ್ವಜನಿಕರು ತಂತ್ರಾಂಶದಲ್ಲಿ ಪಡೆದುಕೊಳ್ಳಬಹುದಾಗಿರುತ್ತದೆ.

- **ವಿವಾಹ ನೋಂದಣಿ ಕಛೇರಿಯ ಗುರುತಿಸುವಿಕೆ:**

ವಧು ಮತ್ತು ವರನ ವಿಳಾಸ ಹಾಗೂ ವಿವಾಹ ನೆರವೇರಿದ ಸ್ಥಳ ಆಧಾರಿಸಿ ವಿವಾಹವನ್ನು ನೋಂದಾಯಿಸಿಕೊಳ್ಳಬೇಕಾದ ಕಛೇರಿ ವಿವರಗಳನ್ನು ದೃಢಪಡಿಸಿಕೊಳ್ಳಬಹುದು. ವಿವಾಹ ನೋಂದಣಿ ಮಾಡಿಕೊಳ್ಳಲು ಆಯಾ ಕಾರ್ಯ ವ್ಯಾಪ್ತಿಯ ಕಛೇರಿಗಳ ವಿವರವನ್ನು ಆನ್‌ಲೈನ್ ಪೋರ್ಟಲ್‌ನಿಂದ ಪಡೆಯಬಹುದಾಗಿರುತ್ತದೆ.

- **KACOMP ಕಾಯ್ದೆ ಅಡಿಯಲ್ಲಿ ಕೃಷಿ ಸಾಲಗಳಿಗೆ ಸಂಬಂಧಿಸಿದ ಡಿಕ್ಲರೇಷನ್ ಮತ್ತು ಸಾಲ ತೀರುವಳಿ ಪತ್ರಗಳ ಫೈಲಿಂಗ್ ಮಾಡುವಿಕೆ:**

ರೈತರಿಗೆ ಕೃಷಿ ಸಾಲ ನೀಡುವ ಸಂದರ್ಭದಲ್ಲಿ KACOMP ಕಾಯ್ದೆ 1974 ಅಡಿಯಲ್ಲಿ ಪಡೆಯುವ ಡಿಕ್ಲರೇಷನ್ ಮತ್ತು ಸಾಲ ತೀರುವಳಿ ಪತ್ರಗಳನ್ನು ಆನ್‌ಲೈನ್ ಮೂಲಕ ಫೈಲಿಂಗ್ ಮಾಡುವ ಸೌಲಭ್ಯವನ್ನು ಬ್ಯಾಂಕುಗಳು ಮತ್ತು ಇತರೆ ಹಣಕಾಸು ಸಂಸ್ಥೆಗಳಿಗೆ ಒದಗಿಸಲಾಗಿದೆ.

- **ಮೌಲ್ಯ ಮೊಬೈಲ್ ಆಪ್**

ಸಾರ್ವಜನಿಕರು ಯಾವುದೇ ಸ್ಥಿರಾಸ್ತಿಯ ಮಾರ್ಗಸೂಚಿ ಮೌಲ್ಯ ತಿಳಿಯಲು ಅನುಕೂಲವಾಗುವಂತೆ, GIS ಆಧಾರಿತ ಮೌಲ್ಯ ಎಂಬ ಹೆಸರಿನ ಮೊಬೈಲ್ ಆಪ್ ಅನ್ನು ಅಭಿವೃದ್ಧಿಪಡಿಸಲಾಗಿದೆ.

- **ಆನ್‌ಲೈನ್ ಇ-ಸ್ಟ್ಯಾಂಪ್ ಮುದ್ರಾಂಕ ಕಾಗದ**

ಸಾರ್ವಜನಿಕರು ತಾವು ಮಾಡಿಕೊಳ್ಳುವ ಕರಾರು ಪತ್ರ ಮತ್ತು ಪ್ರಮಾಣಪತ್ರಗಳಿಗೆ ಮುದ್ರಾಂಕ ಶುಲ್ಕವನ್ನು ಆನ್‌ಲೈನ್ ಮೂಲಕ ಪಾವತಿಸಿ, ಇ-ಸ್ಟ್ಯಾಂಪ್ ಕಾಗದವನ್ನು ತಮ್ಮ ಮನೆಯಿಂದಲೇ ಪ್ರಿಂಟ್ ಔಟ್ ತೆಗೆದುಕೊಳ್ಳುವ ಸೌಲಭ್ಯವನ್ನು ಸ್ಟಾಕ್ ಹೋಲ್ಡಿಂಗ್ ಕಾರ್ಪೋರೇಷನ್ ಲಿ. (SHCIL) ರವರ ಸಹಯೋಗದೊಂದಿಗೆ ಕಲ್ಪಿಸಲಾಗಿದೆ.

ಹೆಚ್ಚಿನ ಮಾಹಿತಿಗಾಗಿ https://kaverionline.karnataka.gov.in ಗೆ ಭೇಟಿ ನೀಡಿ



"ಎಲ್ಲಾ ವೈಯಕ್ತಿಕ ಮತ್ತು ಸಾಮೂಹಿಕ ಚಟುವಟಿಕೆಗಳಲ್ಲಿ ಉನ್ನತಿಯನ್ನು ಸಾಧಿಸಲು ಪ್ರಯತ್ನಿಸಿ ದೇಶದ ಪ್ರಗತಿಗಾಗಿ ಶ್ರಮಿಸುವುದು" – ಪ್ರತಿಯೊಬ್ಬ ಭಾರತೀಯನ ಸಂವಿಧಾನಬದ್ಧ ಮೂಲಭೂತ ಕರ್ತವ್ಯ



ಕರ್ನಾಟಕ ವಾರ್ತೆ
ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ

## ಬೆಳಗಾವಿಯಲ್ಲಿ ಜರುಗಿದ 41ನೇ ಕಬ್ ಮತ್ತು ಬುಲ್ ಬುಲ್ ಉತ್ಸವದಲ್ಲಿ ವಿವಿಧ ಚಟುವಟಿಕೆಗಳಲ್ಲಿ ತೊಡಗಿರುವ ಪುಟಾಣಿಗಳು

## ವಿವಿಧ ಜಿಲ್ಲಾ ಸಂಸ್ಥೆಗಳಲ್ಲಿ ನಡೆದ ಸ್ಕೌಟ್-ಗೈಡ್‌ಗಳ ಚಟುವಟಿಕೆಗಳು



ಉಡುಪಿ



ಬೆಂಗಳೂರು ದಕ್ಷಿಣ



ಹಾಸನ



ಕೋಲಾರ

Regd. as News Paper (Magazine) RNI No: 13348/1959. Postal Regd. No. KA/BGGPO/2580/2[illegible]8-20
Licensed to Post Without Prepayment License WPP NO. 340, Date of Publishing 28th of Every M[illegible]h
Posted at: Bengaluru PSO, Mysore Road, Bengaluru-26 on every month of 28th or 30th (No. of P[illegible]: 40)

## ರಾಜ್ಯದ ವಿವಿಧ ಜಿಲ್ಲಾ ಸಂಸ್ಥೆಗಳ ಸ್ಕೌಟ್ಸ್-ಗೈಡ್ಸ್‌ಗಳು ಕರ್ನಾಟಕ ದರ್ಶನ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಧಾರ್ಮಿಕ ಹಾಗೂ ಪ್ರೇಕ್ಷಣೀಯ ಸ್ಥಳಗಳಿಗೆ ಭೇಟಿ ನೀಡಿರುವ ದೃಶ್ಯಗಳು


ದಾವಣಗೆರೆ


ತುಮಕೂರು


ಬೆಂಗಳೂರು ದಕ್ಷಿಣ


ಶಿರಸಿ


ರಾಯಚೂರು


ಚಿಕ್ಕಬಳ್ಳಾಪುರ



If not delivered, please return to :
THE EDITOR, Karnataka Scout & Guide
State Headquarters, Shanthi Gruha
#39, Palace Road, Bengaluru - 560 001
Ph.: 080-22260017, 22267470
e-mail.: shq@bsgkarnataka.org
shanthigruha@scout.org.in
www.bsgkarnataka.org

RI. K.S.KARICHANNAVAR
t Chief Commissioner
Scouts and Guides
I, DDPI Office
te-587101

Published by : The Bharat Scouts & Guides, Karnataka, State Headquarters
Shanthi Gruha #39, Palace Road, Bengaluru - 560 001. Publisher & Editor : Chinnaswamy Reddy, Printed by : L. Lingappa
M.D. at Sathyasri Printers Pvt. Ltd., 16/1, 3rd Cross, 2nd Main, Kasturiba Nagar, Mysore Road, Bengaluru 26